ಬಿಡಿ ಪ್ರಕಟನೆ - ೭

# ಪಟ್ಟಣದ ಹುಡುಗಿ

ನಾಲ್ಕು ಅಂಕಗಳ ಸಂಗೀತ ನಾಟಕ



ಲೇಖಕರು:
ಬಸವರಾಜ ಕಟ್ಟೀಮನಿ



ಮುದ್ರಣ ಮತ್ತು ಪ್ರಕಾಶನ
ಶಾರದಾ ಪ್ರಕಟನಾಲಯ
ಅರಳೇಪೇಟೆ, ಬೆಂಗಳೂರು - ೨.

ರಕ್ಷಾಪತ್ರದ ರಚನೆ :
**ಜಿ. ಕೆ. ಮೂರ್ತಿ**

ರಕ್ಷಾಪತ್ರದ ಮುದ್ರಣ :
**ಶ್ರೀ ರಾಮಕೃಷ್ಣ ಪ್ರೆಸ್**
ಬೆಂಗಳೂರು – ೨.



ಪ್ರಥಮ ಮುದ್ರಣ : ಮೇ ೧೯೫೫

ಬೆಲೆ :
**ಒಂದೂಕಾಲು ರೂಪಾಯಿ**

# ಮುನ್ನುಡಿ

"ಹಳ್ಳಿ ಮತ್ತು ಪಟ್ಟಣ ಎರಡು ಕಡೆಗಳಲ್ಲೂ ಪ್ರಯೋಗಿಸಲು ಯೋಗ್ಯ ವಾದಂಥ, ಸಾಮಾನ್ಯ ಜನರಿಗೂ ಅರ್ಥವಾಗುವಂಥ, ಹೊಸ ವಿಚಾರಗಳನ್ನು ಹಂಚುವಂಥ, ಜತೆಗೇ ರಂಜನೆಯನ್ನೂ ಒದಗಿಸುವಂಥ ಸಂಗೀತ ನಾಟಕ" ವೊಂದನ್ನು ಬರೆದುಕೊಡಬೇಕೆಂದು ಸೇವಾದಲದ ತರುಣಮಿತ್ರರು ಕೆಲವರು ಹಲವು ವರ್ಷಗಳ ಹಿಂದೆ ನನ್ನನ್ನು ಕೇಳಿಕೊಂಡದ್ದರ ಫಲವಾಗಿ 'ಪಟ್ಟಣದ ಹುಡುಗಿ' ರೂಪುಗೊಂಡಿತು.

ಲೋಕವಿಖ್ಯಾತ ಆಂಗ್ಲ ಲೇಖಕ ಸಾಮರ್‌ಸೆಟ್ ಮಾಮ್ ಅವರ "ದಿ ಲ್ಯಾಂಡ್ ಆಫ್ ಪ್ರಾಮಿಸ್" ಎಂಬ ನಾಟಕದ ಹಲವು ಅಂಶಗಳನ್ನು ಇಲ್ಲಿ ನಾನು ಬಳಸಿಕೊಂಡಿದ್ದೇನೆ. ಆದರೆ, ಇದು ಆ ಕೃತಿಯ ಅನುವಾದ ವೇನೂ ಅಲ್ಲ. ಅಲ್ಲಿರುವ ಅನೇಕ ಪಾತ್ರಗಳು ಇಲ್ಲಿ ಇಲ್ಲ. ಅಲ್ಲಿಲ್ಲದ ಅನೇಕ ಪಾತ್ರಗಳು ಇಲ್ಲಿವೆ. ಮೂಲ ಕಲ್ಪನೆಗಾಗಿ ಮಾತ್ರ ನಾನು ಮಾಮ್ ಅವರಿಗೆ ಋಣಿಯಾಗಿದ್ದೇನೆ.

ನಾಟಕವೆಂದರೆ ಆಡುಗಬ್ಬ. ರಂಗಭೂಮಿಯ ಮೇಲೆ ಪ್ರಯೋಗಿಸಲ್ಪಟ್ಟಾಗಲೇ ನಾಟಕದ ನಿಜವಾದ ಸ್ವಾರಸ್ಯ ಕಂಡುಬರುವುದು. ಈ ವಿಚಾರವನ್ನು ಲಕ್ಷ್ಯದಲ್ಲಿರಿಸಿಕೊಂಡೇ ಈ ನಾಟಕ ಬರೆದಿದ್ದೇನೆ. ಇದನ್ನು ಪ್ರಯೋಗಿಸಲು ಹೆಚ್ಚಿನ ಸಿದ್ಧತೆ – ಸಲಕರಣೆಗಳ ಆವಶ್ಯಕತೆಯೂ ಇಲ್ಲ. ಒಂದೆರಡು ಸಾಧಾರಣ ತೆರೆಗಳು, ಸಾಧಾರಣ ಬಟ್ಟೆಬರೆಗಳು ಇಷ್ಟಾದರೆ ಸಾಕು. ಹಳ್ಳಿಗಳ ನಾಟಕ ಪ್ರೇಮಿಗಳೂ ಕೂಡ ಸುಲಭವಾಗಿ ಈ ನಾಟಕ ಆಡಬಹುದು.

"We want Art that can reach to the common peasant" ಎಂದು ಗಾಂಧೀಜೀ ಹೇಳಿದ್ದರು. ಕಲೆ ಕೇವಲ ಪಟ್ಟಣಿಗರ ತೊತ್ತಾಗಿ ಉಳಿಯಬಾರದು; ಅದು ಹಳ್ಳಿಗಳಿಗೂ ಮುಟ್ಟಬೇಕು, ಹಳ್ಳಿಗರ ಹೃದಯಗಳಿಗೂ ಮುಟ್ಟಬೇಕು. ನಾಡಿನ ನಿರ್ಮಾಣ ಕಾರ್ಯದಲ್ಲಿ ಸಾಹಿತ್ಯ ಮತ್ತು ಕಲೆಗಳೂ ಮಹತ್ವದ ಪಾತ್ರ ವಹಿಸಬೇಕಾಗಿದೆ.

ಈ ನಾಟಕದ ಆರಂಭದಲ್ಲಿ ಪ್ರಾರ್ಥನಾ ಗೀತೆಯೆಂದು ಮಹಾಕವಿ ಶ್ರೀ ಕುವೆಂಪು ಅವರ 'ಜೈ ಕರ್ನಾಟಕ ಮಾತೆ' ಎಂಬ ಪದ್ಯವನ್ನು ಬಳಸಿ ಕೊಂಡಿದ್ದೇನೆ. ಅದಕ್ಕಾಗಿ ಅನುಮತಿಯಿತ್ತು ಉಪಕಾರ ಮಾಡಿದುದಕ್ಕಾಗಿ ನಾನು ಅವರಿಗೆ ಬಹಳ ಋಣಿಯಾಗಿದ್ದೇನೆ.

ಮಲಾಮರಡಿ,
ಅಂಕಲಗಿ ಅಂಚೆ
(ಬೆಳಗಾವಿ)

ಬಸವರಾಜ ಕಟ್ಟೀಮನಿ

## ಪಾತ್ರಗಳು :

ಸದಾಶಿವ (೨೫)

ಮಲ್ಲಪ್ಪ (೩೫)

ಟೋಪಿ ಶಾಂತಣ್ಣ (೪೫)

ಮಹಾಲಿಂಗಪ್ಪ (೫೬)

ಶಂಕರಪ್ಪ (೨೮)

ಸರೋಜ (೧೮)

ಪಾರ್ವತಿ (೨೦)

ಚಂಪಾವತಿ (೨೫)

# ಪ್ರಾರ್ಥನೆ

ಜೈ! ಭಾರತ ಜನನಿಯ ತನುಜಾತೆ,
ಜಯ ಹೇ ಕರ್ನಾಟಕ ಮಾತೆ!

ಜೈ! ಸುಂದರ ನದಿವನಗಳ ನಾಡೆ.
ಜಯ ಹೇ ರಸಋಷಿಗಳ ಬೀಡೆ!

ಭೂದೇವಿಯ ಮಕುಟದ ನವಮಣಿಯೆ,
ಗಂಧದ ಚಂದದ ಹೊನ್ನಿನ ಗಣಿಯೆ,
ರಾಘವ ಮಧುಸೂದನರವತರಿಸಿದ
ಭಾರತ ಜನನಿಯ ತನುಜಾತೆ,
ಜಯ ಹೇ ಕರ್ನಾಟಕ ಮಾತೆ!

ಜನನಿಯ ಜೋಗುಳ ವೇದದ ಘೋಷ
ಜನನಿಗೆ ಜೀವವು ನಿನ್ನಾವೇಶ.
ಹಸುರಿನ ಗಿರಿಗಳ ಸಾಲೆ
ನಿನ್ನಯ ಕೊರಳಿನ ಮಾಲೆ
ಕಪಿಲ ಪತಂಜಲ ಗೌತಮ ಜಿನನುತ
ಭಾರತ ಜನನಿಯ ತನುಜಾತೆ,
ಜಯ ಹೇ ಕರ್ನಾಟಕ ಮಾತೆ!

—ಶ್ರೀ ಕುವೆಂಪು

# ಮೊದಲನೆಯ ಅಂಕ.

[ಪಟ್ಟಣದಲ್ಲಿ ಕೆಳ ಮಧ್ಯಮ ವರ್ಗದವರ ಮನೆಯ ಸಾಧಾರಣ ಕೊಟಡಿ. ಒಂದೆರಡು ಕುರ್ಚಿಗಳು, ಒಂದು ಮೇಜು. ಮೇಜಿನ ಮೇಲೆ ಒಂದೆರಡು ಪುಸ್ತಗಳು. ಸಿನಿಮಾ ಪತ್ರಿಕೆಗಳು, ಕನ್ನಡಿ, ಬಾಚಣಿಗೆ, ಸ್ನೋ ಪೌಡರ್ ಡಬ್ಬಿಗಳು, ಗೋಡೆಗಳ ಮೇಲೆ ಸಿನಿಮಾ ತಾರೆಯರ ಚಿತ್ರಗಳು. ಒಂದು ಮೂಲೆಯಲ್ಲಿ ಟ್ರಂಕಿನ ಮೇಲೆ ಸಣ್ಣ ಹಾರ್ಮೋನಿಯಂ. ಗೂಟಕ್ಕೆ ಹೆಂಗುಸರ ಕೊಡೆ. ಸುಶಿಕ್ಷಿತ ಯುವತಿಯ ಖಾಸಗಿ ಕೊಠಡಿಯ ವಾತಾವರಣ. ರಂಗದ ಎಡಭಾಗದಲ್ಲಿರುವ ಮೇಜಿನ ಮೇಲಿರುವ ಕನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತಾ ಆಗಾಗ ಕೂದಲಿನ ಮೇಲೆ ಬಾಚಣಿಗೆಯನ್ನಾಡಿಸುತ್ತ ಯೋಚನಾಮಗ್ನಳಾಗಿ ನಿಂತಿದ್ದಾಳೆ ಸರೋಜ. ಅವಳು ಉಟ್ಟಿರುವುದು ಸಾಧಾರಣ ಬಿಳಿಯ ಸೀರೆ, ತೊಟ್ಟಿರುವುದು ಬಿಳಿಯ ರವಿಕೆ, ಕೈಗಳಲ್ಲಿ ಎರಡೆರಡೇ ಕಪ್ಪು ಬಳೆಗಳಿವೆ. ಕೊರಳಲ್ಲಿ ಏನೂ ಇಲ್ಲ.
ಹೊರಗಡೆ 'ಸರೋಜಾ, ಸರೋಜಾ' ಎಂದು ಯಾರೋ ಕೂಗುವುದು ಕೇಳುವುದು. ಕನ್ನಡಿಯಿಂದ ಮುಖ ತಿರುಗಿಸಿ ನಿಧಾನವಾಗಿ ಬಾಗಿಲಿನತ್ತ ನೋಡುವಳು ಸರೋಜಾ. ಚಂಪಾವತಿ ಪ್ರವೇಶಿಸುವಳು. ಕೊಂಚ ದಪ್ಪನೆಯ ದೇಹದ, ಆಧುನಿಕ ಫ್ಯಾಷನ್ನಿನ, ಜಾರ್ಜೆಟ್ ಸೀರೆಯ ಬೆಡಗುಗಾತಿ ಚಂಪಾವತಿ, ಎಡಗೈಯಲ್ಲಿ ಗಡಿಯಾರ, ಬಲಗೈಯಲ್ಲಿ ಒಂದೇ ಬಳೆ. ಕಿವಿಗಳಲ್ಲಿ ಹೊಳೆಯುವ ಲೋಲಾಕು. ಕಂಕುಳಲ್ಲಿ ಕೊಡೆ. ಕೈಯಲ್ಲಿ ವ್ಯಾನಿಟಿ ಬ್ಯಾಗ್. ಅವೆರಡನ್ನೂ ಮೇಜಿನ ಮೇಲೆ ಬಿಸುಟು ಕೈವಸ್ತ್ರದಿಂದ ಗಾಳಿ ಹಾಕಿಕೊಳ್ಳುತ್ತ ಸರೋಜಳ ಬಳಿ ಬಂದು ಅವಳ ಭುಜದ ಮೇಲೆ ಕೈಯಿಟ್ಟು ಸಂತೈಸುವ ಸ್ವರದಲ್ಲಿ ಮಾತನಾಡಿಸುವಳು.]

**ಚಂಪಾವತಿ :**

ಸರೋಜಾ!

[ಸರೋಜ ಬಿಕ್ಕಿ ಬಿಕ್ಕಿ ಅಳುತ್ತಾ ಚಂಪಾವತಿಯ ಭುಜದ ಮೇಲೆ ತಲೆಯೊರಗಿಸುವಳು.]

**ಚಂಪಾವತಿ :**

ಅಳಬೇಡ ಸರೋಜಾ, ಅಳಬೇಡ. (ಸರೋಜಳ ತಲೆಗೂದಲ ಮೇಲೆ ಕೈಯಾಡಿಸುತ್ತ) ಶೂ ಶೂ, ಬೇಬಿ, ಅಳಬೇಡ, ಅಳಬೇಡ. ಅತ್ತರೇನು ಬರುತ್ತದೆ?

[ಸರೋಜ ನಿಧಾನವಾಗಿ ಬಿಕ್ಕುತ್ತಿರುವಳು.]

**ಚಂಪಾವತಿ :**

(ಸರೋಜಳ ಕಂಬನಿಗಳನ್ನೊರೆಸುತ್ತಾ) ಅತ್ತರೇನು ಬರುತ್ತದೆ? ಸರೋಜಾ?

ಸಮಾಧಾನ ಮಾಡಿಕೋಬೇಕು. ಹುಟ್ಟಿದವರಿಗೆ ಸಾವು ತಪ್ಪಿದಲ್ಲವಲ್ಲಾ! ನಾನೂ ಒಂದು ದಿನ ಸಾಯುವವಳೇ. ಎಲ್ಲರೂ ಸಾಯುವವರೇ.

**ಸರೋಜ :**

(ಗದ್ಗದ ಸ್ವರದಿಂದ) ಅವ್ವಾ, ಅವ್ವಾ....

**ಚಂಪಾವತಿ :**

(ಸರೋಜಳನ್ನು ಕುರ್ಚಿಯ ಮೇಲೆ ಕೂಡಿಸಿ, ತಾನು ಅವಳನ್ನು ಬಳಸಿ ನಿಂತು, ಅವಳ ಬೆನ್ನು ನೇವರಿಸುತ್ತಾ) ನಿನ್ನ ಅವ್ವ ಅಂದರೆ ನನಗೂ ಅವ್ವ ಇದ್ದಂತೇ ಇದ್ದಳು. ನನಗಷ್ಟೇ ಯಾಕೆ, ಸಾಲೆಯಲ್ಲಿನ ಎಲ್ಲಾ ಮಾಸ್ತರತಿಯರಿಗೆ, ಎಲ್ಲಾ ಹುಡುಗಿಯರಿಗೆ ಅವ್ವ ಇದ್ದಂತಿದ್ದಳು. ಅಂಥಾ ಹೆಡ್‌ಮಾಸ್ತರತಿ ಮತ್ತೆ ಸಿಗುವದು ಶಕ್ಯವಿಲ್ಲ. ಯಾರಿಗೂ ಎಂದೂ ಕೆಟ್ಟ ಮಾತಾಡಿದವಳಲ್ಲ, ಯಾರನ್ನೂ ಗದರಿಸಿದವಳಲ್ಲ. ಅವಳು ಇಷ್ಟು ಬೇಗ ನಮ್ಮನ್ನು ಬಿಟ್ಟು ಹೋಗಬಹುದೆಂದು ಯಾರು ತಿಳಿದಿದ್ದರು? ಎಂಥಾ ಅನ್ಯಾಯವಾಯಿತು? ಕಡೆಯ ಸಲ ಆ ತಾಯಿಯ ಮುಖ ನೋಡುವ ಪುಣ್ಯ ನನಗಿರಲಿಲ್ಲ. ನಾನಾಗ ಮುಂಬಯಿಯಲ್ಲಿದ್ದೆ. ವಕೀಲರ ಪತ್ರದಿಂದಲೇ ನನಗೀಸುದ್ದಿ ತಿಳಿದದ್ದು. ಅವರೂ ಬಹಳ ದುಃಖದಿಂದ ಬರೆದಿದ್ದರು. ನಿನ್ನ ತಾಯಿ ಅಂದರೆ ಅವರಿಗೂ ಬಹಾಳ ವಿಶ್ವಾಸ.

**ಸರೋಜ :**

(ದುಃಖವನ್ನು ಹತ್ತಿಕ್ಕಿಕೊಳ್ಳುತ್ತ) ಅಂಥಾ ತಾಯಿ ನನ್ನ ಪರದೇಶಿಯನ್ನಾಗಿ ಮಾಡಿ ಹೋಗಿಬಿಟ್ಟಳಲ್ಲಾ ಚಂಪಾವತಿ!

**ಚಂಪಾವತಿ :**

ದೇವರಾಟ ಸರೋಜಾ, ಇದೆಲ್ಲಾ ದೇವರಾಟ.

**ಸರೋಜ :**

ದೇವರಾಟ! ಇದೆಂಥಾ ಆಟ ಅವನದು ಚಂಪಾವತಿ? ನಮ್ಮಂಥವರನ್ನು ಪರದೇಶಿಗಳನ್ನಾಗಿ ಮಾಡಿ ಗೋಳಾಡಿಸುವದರಿಂದ ಆ ದೇವರಿಗೇನು ಸಂತೋಷ? ನಾನಿನ್ನೂ ಎಳೆಯ ಕೂಸಾಗಿದ್ದಾಗಲೇ ನನ್ನ ತಂದೆಯನ್ನು

ತೆಗೆದುಕೊಂಡು ಹೋದ. ಮನೆಯ ಆಸ್ತಿಪಾಸ್ತಿಯೇನೂ ಇರಲಿಲ್ಲ. ಅಣ್ಣಾ ತಮ್ಮಂದಿರಿರಲಿಲ್ಲ. ಕೂಸಾಗಿದ್ದ ನನ್ನನ್ನು ಕಟ್ಟಿಕೊಂಡು ಅವ್ವ ಹೊಟ್ಟೆಗಾಗಿ ನೌಕರಿ ಹಿಡಿಯಬೇಕಾಯಿತು. ಮಾಸ್ತರತಿಯಾಗಿ ಇಲ್ಲಿಗೆ ಬಂದು ನನ್ನನ್ನು ಬೆಳೆಸಿ ದೊಡ್ಡಾಕೆಯನ್ನಾಗಿ ಮಾಡಿ ಸಾಲೆ ಕಲಿಸಿದಳು. ನಾನಿನ್ನೂ ಒಂದು ದಡಕ್ಕೆ ಹತ್ತುವದರಲ್ಲೇ ನನ್ನ ತಾಯಿಯನ್ನು ಸೆಳೆದುಕೊಂಡು ಹೋದನಲ್ಲಾ ಆ ದೇವರು! ಇದೆಂಥ ಆಟ ಅವನದು ಚಂಪಾವತಿ?

**ಚಂಪಾವತಿ :**

ನಮ್ಮ ಸತ್ವಪರೀಕ್ಷೆ ಮಾಡುವದಕ್ಕೇ ದೇವರು ಇಂಥಾ ಸಂಕಟಗಳಲ್ಲಿ ನಮ್ಮನ್ನು ನೂಕುತ್ತಾನೆ ಸರೋಜಾ. ಇವರನ್ನು ಪೇಚಿನಲ್ಲಿ ಸಿಕ್ಕಿಸೋಣ, ಇವರು ಹ್ಯಾಗೆ ಪಾರಾಗುತ್ತಾರೋ ನೋಡೋಣ ಅಂತ ಕಾಯುತಾ ಇರುತಾನೆ. ಅವನಿಗಂತೂ ಅದೊಂದು ಆಟ. ನಾವೂ ಕೂಡಾ ಅದು ಆಟ ಅಂತಲೇ ತಿಳಿದುಕೋಬೇಕು. ಸಂಕಟ ಬಂದಾಗ ಸೋತು ಹೋಗಿ ಅಳುತ್ತಾ ಕೂಡಬಾರದು. ಧೈರ್ಯದಿಂದ ಒಂದು ಹಾದಿ ಹುಡುಕಿಕೊಂಡು ಮುಂದೆ ಸಾಗಬೇಕು. ನನಗೇನು ಸಂಕಟ ಬಂದಿರಲಿಲ್ಲವೆಂತ ತಿಳಿದಿದ್ದೀಯಾ? ನಿನಗಿಂತಲೂ ಹೆಚ್ಚು ಕಷ್ಟ ಬಂದಿದ್ದವು ನನಗೂ. ನಿನಗಾದರೂ ಒಬ್ಬ ತಾಯಿಯಿದ್ದಳು, ತಾಯಿಯ ಪ್ರೇಮ ಅಂದರೇನೆಂಬುದನ್ನೂ ನೀನು ಕಂಡೆ. ಇಷ್ಟು ವರ್ಷಗಳವರೆಗೆ ಅವಳ ಪ್ರೇಮದ ನೆರಳಲ್ಲಿ ನಗು ನಗುತ್ತಾ ಬೆಳೆದೆ. ನಾನಾದರೋ ತಾಯಿಯ ಮುಖವನ್ನೂ ನೋಡಲಿಲ್ಲ. ನನ್ನನ್ನು ಹೆತ್ತಾಕೆ ಯಾರು, ಎಲ್ಲಿಯವಳು ಅನ್ನುವದೂ ನನಗೆ ಗೊತ್ತಿಲ್ಲ.

**ಸರೋಜ :**

(ಸಹಾನುಭೂತಿಯಿಂದ) ಪಾಪ, ಪಾಪ, ಬಹಳ ಕಷ್ಟಪಟ್ಟಿರಬೇಕು ನೀನೂ. ಇದೆಲ್ಲಾ ಗೊತ್ತೇ ಇರಲಿಲ್ಲ ನನಗೆ.

**ಚಂಪಾವತಿ :**

ನಿನ್ನ ತಾಯಿಗೆ ಎಲ್ಲಾ ಗೊತ್ತಿತ್ತು. ಪುಣ್ಯವಂತೆ. ನನ್ನನ್ನೂ ಒಬ್ಬ ಮಗಳ ಹಾಗೇ ನೋಡಿಕೊಂಡಳು. ತಾಯಿಯ ಪ್ರೇಮವೆಂದರೇನೆಂಬುದನ್ನು

ತಿಳಿಯದಿದ್ದ ನನಗೆ ಅದರ ಸವಿಯೆಂಥದೆಂಬುದನ್ನು ತೋರಿಸಿಕೊಟ್ಟಳು. ನಾನು ಎಲ್ಲೋ ಹುಟ್ಟಿದೆ. ನಾನಿನ್ನೂ ಒಂದು ವಾರದ ಕೂಸಾಗಿದ್ದಾಗಲೇ ಮಿಶನರಿಗಳ ಹತ್ತಿರ ಬಿಟ್ಟು ಹೋದಳಂತೆ ನನ್ನ ತಾಯಿ. ನಾನು ಅಲ್ಲೇ ಬೆಳೆದು ದೊಡ್ಡವಳಾದೆ. ಕಾನ್ವೆಂಟಿನಲ್ಲಿ ಕಲಿತು ಮಾಸ್ತರತಿಯ ಕೆಲಸವನ್ನೂ ದೊರಕಿಸಿಕೊಂಡೆ. ಸ್ವತಂತ್ರಳಾದೆ. ಈಗ ನನಗೇನೂ ಕಷ್ಟವಿಲ್ಲ. ನಿಜ. ಆದರೂ....

**ಸರೋಜ :**

ಮದುವೆಯೊಂದು ಆಗಿಬಿಟ್ಟರೆ ನೀನು ಪೂರ್ಣ ಸುಖಿಯಾಗುವಿ.

**ಚಂಪಾವತಿ :**

(ನಗುತ್ತಾ) ಮದುವೆ! ಮದುವೆಯಾಗಬೇಕಾದದ್ದು ನಿನಗೆ. ನನಗಲ್ಲ. ನನಗೇನು ಆಗಲೇ ಇಪ್ಪತ್ತೈದಾಯ್ತು. ಆಯುಷ್ಯದ ಅರ್ಧ ಹಾದಿ ಮುಗಿದು ಹೋಯ್ತು. ಈ ಇಪ್ಪತ್ತೈದು ವರ್ಷಗಳನ್ನು ಏಕಾಂಗಿಯಾಗಿ ಕಳೆದ ನನಗೆ ಇನ್ನು ಇಪ್ಪತ್ತೈದು ವರ್ಷ ಕಳೆಯುವುದು ದೊಡ್ಡದಲ್ಲ. ನೀನಿನ್ನೂ ಹದಿನೆಂಟರ ಹುಡುಗಿ. ಮದುವೆಯಾಗಬೇಕಾದದ್ದು ನಿನಗೆ.

**– ಗೀತೆ –**

**ಸಖಿ, ಬಿಡು ಶೋಕವ, ನಿರಾಶಾಭಾವವ**
**ಬಿಡು, ರಮಣನ ಜೊತೆಗೂಡು !**
**ಹರಯುವಿರುತಲಿ, ಹೃದಯೇಶನಿಗೊಲಿದು**
**ನಡೆ, ಸುಖ ಸಂಸಾರವ ಹೂಡು !**
**ಒಲವಿನೊರತೆಯು ನೆಗೆದೇಳಲಿ ಪುಟಿದು**
**ನಡೆ, ನವ ಸಂಸಾರವ ಮಾಡು !**

**ಸರೋಜ :**

ನನ್ನ ತಾಯಿ ತೀರಿಕೊಂಡು ಎರಡು ತಿಂಗಳು ಕೂಡಾ ಆಗಲಿಲ್ಲ, ಇನ್ನೂ – ಈಗಲೇ ಮದುವೆಯ ಮಾತು ತೆಗೆಯುತ್ತೀಯಲ್ಲ ಚಂಪಾವತಿ ?

**ಚಂಪಾವತಿ :**

ನಿನ್ನ ತಾಯಿ ತೀರಿಕೊಂಡದಕ್ಕೇ ನಿನ್ನ ಮದುವೆ ಅವಸರದ ಪ್ರಶ್ನೆಯಾಗಿದೆ, ಸರೋಜಾ. ನಾನೇನೋ ಮಿಶನ್ನಿನಲ್ಲಿ ಬೆಳೆದ ಹುಡುಗಿ. ನಾನು ಹ್ಯಾಗಿದ್ದರೂ ನಡೆಯುತ್ತದೆ. ನಾನೇನು ಮಾಡಿದರೂ ಜನರು ಹೆಚ್ಚು ಲಕ್ಷ್ಯ ಕೊಡುವದಿಲ್ಲ. ನಿನ್ನದು ಹಾಗಲ್ಲ. ನೀನು ಹಿಂದೂ ಹುಡುಗಿ. ನಿನ್ನ ಪ್ರತಿಯೊಂದು ಚಟುವಟಿಕೆಯನ್ನೂ ನಿಮ್ಮ ಸಮಾಜ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ನೋಡುವದು. ಅದರ ಕಠೋರದೃಷ್ಟಿಯಿಂದ ತಪ್ಪಿಸಿಕೊಳ್ಳ ಬೇಕಾದರೆ ಮದುವೆಯಲ್ಲದೆ ಬೇರೆ ಹಾದಿಯಿಲ್ಲ ನಿನಗೆ.

**ಸರೋಜ :**

ನನಗೇನೂ ಹಾಗನ್ನಿಸುವದಿಲ್ಲ. ನಿನ್ನ ಹಾಗೆ ನಾನೂ ಸ್ವತಂತ್ರಳಾಗಿ ಯಾಕೆ ಇರಬಾರದು ?

**ಚಂಪಾವತಿ :**

ಮನಸು ಮಾಡಿದರೆ ಇರಬಲ್ಲೆ. ನಿನ್ನ ತಾಯಿಯ ಹಾಗೆ ನೀನೂ ಮಾಸ್ತರತಿ ಯಾಗುವ ವಿಚಾರವಿದೆಯೇ ಏನು ?

**ಸರೋಜ :**

ನನ್ನ ತಾಯಿಯ ಜಾಗವನ್ನು ನನಗೇ ಕೊಡಬಹುದಲ್ಲ ಸ್ಕೂಲ್‌ಬೋರ್ಡಿ ನವರು ?

**ಚಂಪಾವತಿ :**

ಈ ಎರಡು ತಿಂಗಳಲ್ಲಿ ಏನಾದರೂ ಪ್ರಯತ್ನ ಮಾಡಿದ್ದೀಯಾ ?

**ಸರೋಜ :**

ಮನೇಬಿಟ್ಟು ಹೊರಗೆ ಹೋಗಲಿಕ್ಕೇ ಮನಸ್ಸಾಗುತ್ತಿರಲಿಲ್ಲ. ಇನ್ನು ಎಲ್ಲಿಯ ಪ್ರಯತ್ನ ? ವಕೀಲ ಶಾಂತಣ್ಣನವರೇನೋ ಭರವಸೆಕೊಟ್ಟಿದ್ದಾರೆ. ಸ್ಕೂಲ್‌ಬೋರ್ಡ್ ಚೇರ್ಮನ್ನರ ಹತ್ತರ ಮಾತಾಡಿ ನೌಕರಿ ಕೊಡಿಸುತ್ತಾ ರಂತೆ.

**ಚಂಪಾವತಿ :**

(ನಗುತ್ತಾ) ಹೀಗೇನು ? ನನ್ನ ಮುಂದೆ ಏನೂ ಹೇಳಲಿಲ್ಲವಲ್ಲ ಅವರು ?

**ಸರೋಜ :**

ಎಲ್ಲೋ ಮರೆತಿರಬಹುದು ಬಿಡು. ಈ ಎರಡು ತಿಂಗಳಲ್ಲಿ ಅವರೇ ನನಗೆ ಧೈರ್ಯ ಕೊಟ್ಟವರು. ಮಲ್ಲಣ್ಣ ಬಂದಿದ್ದ, ನನ್ನನ್ನು ಕರೆದೊಯ್ಯಲಿಕ್ಕೆ. ನಾನೇನೂ ಹೋಗಲಿಲ್ಲ.

**ಚಂಪಾವತಿ :**

ಮಲ್ಲಣ್ಣ ! ಇವನ್ಯಾವ ಅಣ್ಣ ಬಂದನವ್ವಾ ನಿನಗೆ ?

**ಸರೋಜ :**

ನಮ್ಮ ದೊಡ್ಡಪ್ಪನ ಮಗ. ಹಳ್ಳಿಯಲ್ಲಿದ್ದಾನೆ. ನಮ್ಮ ತಂದೆಗೂ ಅವನ ತಂದೆಗೂ ಮನಸ್ಸು ನೆಟ್ಟಗಿರಲಿಲ್ಲವಂತೆ. ಅದಕ್ಕೆ ನಮ್ಮ ತಂದೆ ಪಟ್ಟಣಕ್ಕೆ ಹೋಗಿ ನೌಕರಿ ಹಿಡಿದರು. ಅವರ ಮದುವೆಗೂ ಕೂಡಾ ಹಳ್ಳಿಯಿಂದ ಯಾರೂ ಬಂದಿರಲಿಲ್ಲವಂತೆ. ನಮ್ಮ ತಂದೆ ತೀರಿಕೊಂಡಾಗ ಒಮ್ಮೆ ಬಂದು ನಮ್ಮ ತಾಯಿಯನ್ನು ಮಾತಾಡಿಸಿಕೊಂಡು ಹೋದರಂತೆ. ನಾನು ಚಿಕ್ಕವಳಿದ್ದಾಗ ಮಲ್ಲಣ್ಣ ಒಂದೆರಡು ಸಲ ಬಂದಿದ್ದ. ಆ ಮೇಲೆ ಅವನು ಬಂದದ್ದು ಮೊನ್ನೆಯಷ್ಟೆ.

**ಚಂಪಾವತಿ :**

ಅವನು ಅನುಕೂಲವಾಗಿದ್ದಾನೇನು ?

**ಸರೋಜ :**

ಅಂಥ ಶ್ರೀಮಂತನೇನೂ ಅಲ್ಲವಾದರೂ ಅಂಥ ಬಡವನೂ ಅಲ್ಲ. ಸ್ವಲ್ಪ ಮನೆಯ ಹೊಲವಿದೆಯಂತೆ. ತೋಟವನ್ನೂ ಮಾಡಿದ್ದಾನೆ. ಕಬ್ಬು, ಮೆಣಸಿನಕಾಯಿ, ಕಾಯಿಪಲ್ಯೆ ಬೆಳೆಯುತ್ತಾನಂತೆ. ಇಲ್ಲಿ ಒಬ್ಬಳೇ ಏನು ಇರುತ್ತೀ, ಊರಿಗೆ ಬಂದುಬಿಡು ಅಂತ ಬಹಳ ಒತ್ತಾಯ ಮಾಡಿದ. ನನಗೇ ಮನಸ್ಸಾಗಲಿಲ್ಲ.

**ಚಂಪಾವತಿ :**

ಈ ನಿಮ್ಮ ಮಲ್ಲಣ್ಣನಿಗೆ ವಯಸ್ಸೆಷ್ಟು ?

**ಸರೋಜ :**

ಮೂವತ್ತೋ ಮೂವತ್ತೆರಡೋ ಆಗಿರಬಹುದು.

**ಚಂಪಾವತಿ :**

ಮನೆಯಲ್ಲಿ ಮತ್ತೆ ಯಾರಿದ್ದಾರಂತೆ ?

**ಸರೋಜ :**

ಅವನು, ಅವನ ಹೆಂಡತಿ ಇಬ್ಬರೇ. ಅವರ ತಂದೆಗೆ ಅವನೊಬ್ಬನೇ ಮಗ.

**ಚಂಪಾವತಿ .**

ಹಾಗಾದರೆ ನೀನು ಅಲ್ಲಿ ಸುಖವಾಗಿರಬಹುದಲ್ಲ ?

**ಸರೋಜ .**

ಏನು ಸುಖವೋ ಬಿಡಪ್ಪಾ. ಆ ಹಾಳು ಹಳ್ಳಿಯಲ್ಲಿ ಎಂಥಾ ಸುಖ, ಏನು ಕತೆ ? ಅಲ್ಲೇನು ಪೇಟೆಯೋ, ಸಿನಿಮಾವೇ, ನಾಟಕವೇ, ವಾಚನಾಲಯವೇ, ಮಹಿಳಾ ಸಮಾಜವೇ, ಗೆಳತಿಯರೇ ? ಪಟ್ಟಣದಲ್ಲೇ ಹುಟ್ಟಿ ಪಟ್ಟಣದಲ್ಲೇ ಬೆಳೆದ ನಾನು ಆ ಅಡವಿಯಲ್ಲಿ ಹೊತ್ತು ಕಳೆಯುವದಾದರೂ ಹ್ಯಾಗೆ ? ನನಗೇನೋ ಹಳ್ಳಿ ಅಂದೊಡನೆ ಮುಳ್ಳು ಬಂದಂತಾಗುತ್ತದೆ ಮೈಮೇಲೆ.

**ಚಂಪಾವತಿ :**

(ನಗುತ್ತಾ) ಹೌದೇ, ಪಟ್ಟಣದ ಹುಡುಗಿ ! ನೀನು ಹೇಳುವದೂ ಸರಿಯೆ. ಆದರೂ ಒಂದೆರಡು ತಿಂಗಳು ಹಳ್ಳಿವಾಸ ಮಾಡಿದರೆ ಅದೂ ರೂಢಿಯಾಗುತ್ತದೆ. ಅಲ್ಲದೆ, ನೀನೇನೂ ಅಲ್ಲಿ ಬಹಳ ದಿನ ಇರಲಿಕ್ಕಿಲ್ಲವಲ್ಲ. ಒಂದು ಒಳ್ಳೆಯ ವರ ನೋಡಿ ನಿನಗೆ ಮದುವೆ ಮಾಡಬಹುದು ನಿಮ್ಮಣ್ಣ.

**ಸರೋಜ :**

ನನಗೀಗಲೆ ಮದುವೆಯಾಗುವ ಮನಸ್ಸಿಲ್ಲ ಚಂಪಾವತಿ. ಇನ್ನೂ ನಾಲ್ಕೈದು ವರ್ಷಗಳವರೆಗಾದರೂ ನಾನೊಬ್ಬಳೇ ಸ್ವತಂತ್ರಳಾಗಿ ಬದುಕ

ಬೇಕೆನ್ನುತ್ತೇನೆ. ಮದುವೆಯೆಂದರೆ ಗಂಡಸಿನ ಗುಲಾಮಗಿರಿಯಿದ್ದ ಹಾಗೆ, ಅಲ್ಲವೇ ?

**ಚಂಪಾವತಿ :**

ನಿನ್ನ ವಿಚಾರ ಹೀಗಿದ್ದರೆ ಅಡ್ಡಿಯಿಲ್ಲ. ಆದರೆ, ಮೊದಲು ಕೆಲಸವೊಂದು ಸಿಕ್ಕಬೇಕಲ್ಲ ಸರೋಜಾ ?

**ಸರೋಜ :**

ಶಾಂತಣ್ಣನವರು ಹೇಳಿದ್ದಾರೆ, ಕೊಡಿಸುತ್ತೇನೆ ಅಂತ.

**ಚಂಪಾವತಿ :**

(ಕೊಠಡಿಯಲ್ಲಿ ನಡೆದಾಡುತ್ತ) ಶಾಂತಣ್ಣನವರು ಹೇಳಿದ್ದಾರೆ....ಶಾಂತಣ್ಣನವರು! ಅವರು ನಿನಗೆ ಕೆಲಸ ಕೊಡಿಸಬಹುದು ಅಂತ ತಿಳಿಯೋಣ. ಆದರೆ....ಆದರೆ....

**ಸರೋಜ :**

ಆದರೇನು ಚಂಪಾವತಿ ? ಅವರ ಬಗ್ಗೆ ನಿನಗೇನಾದರೂ ಸಂಶಯವಿದೆಯೋ? ಅಪ್ಪನಿಗೂ ಅವರಿಗೂ ಬಹಳ ವಿಶ್ವಾಸವಿತ್ತು. ನಿನಗೂ ಗೊತ್ತಿದೆಯಲ್ಲ ?

**ಚಂಪಾವತಿ :**

ಗೊತ್ತಿದೆ, ನನಗೂ ಗೊತ್ತಿದೆ. ಅವರ ವಿಷಯವೆಲ್ಲಾ ನನಗೆ ಚೆನ್ನಾಗಿ ಗೊತ್ತಿದೆ. ನಿನಗೆ ಮಾತ್ರ ಕೆಲವು ಸಂಗತಿಗಳು ಗೊತ್ತಿದ್ದ ಹಾಗೆ ಕಾಣುವದಿಲ್ಲ. ಹೂಂ. ಹೋಗಲಿ ಬಿಡು. (ಎಂದು ಮಾತು ನಿಲ್ಲಿಸುವಳು.)

**ಸರೋಜ :**

ನನಗೆ ಗೊತ್ತಿಲ್ಲದ ಸಂಗತಿ ಅಂದರೇನು ಚಂಪಾವತಿ ? ಶಾಂತಣ್ಣನವರು ಒಳ್ಳೆಯವರಲ್ಲ ಅನ್ನುತ್ತೀಯಾ ?

**ಚಂಪಾವತಿ :**

ಈ ಜಗತ್ತಿನಲ್ಲಿ ಎಲ್ಲ ರೀತಿಯಿಂದ ಒಳ್ಳೆಯವರಾಗಿರುವವರು ಬಹಳ ಕಡಿಮೆ ಸರೋಜಾ.

**ಸರೋಜ :**

ಏನೋ ಒಗಟು ಜೋಳಿದಂತೆ ಹೇಳುತ್ತೀಯಲ್ಲ? ಸ್ಪಷ್ಟವಾಗಿ ಬಿಡಿಸಿ ಹೇಳ ಬಾರದೇ?

**ಚಂಪಾವತಿ :**

ಬಿಡಿಸಹೋದಷ್ಟೂ ಗಡುಚಾಗುವ ವಿಷಯ ಇದು. ಇಂಥಾ ಸಂಗತಿಗಳನ್ನು ಯಾರೂ ಯಾರಿಗೂ ಹೇಳುವ ಹಾಗಿಲ್ಲ. ಅವರವರೇ ತಿಳಿದುಕೋಬೇಕು. (ಕೈ ಗಡಿಯಾರ ನೋಡಿಕೊಂಡು) ಹೂಂ. ಟೈಂ ಆಯ್ತು. ನಾನೀಗ ಹೊರಡುತ್ತೇನೆ. ಇನ್ನೇನು ಇಲ್ಲೇ ಇರುತ್ತೀಯಲ್ಲ ನೀನು, ಮತ್ತೆ ಬರುತ್ತೇನೆ ನಾಳೆ.

**ಸರೋಜ :**

ಒಂದೈದು ಮಿನುಟು ಕೂಡಲ್ಲ, ಚಹಾ ಮಾಡ್ತೇನೆ.

**ಚಂಪಾವತಿ :**

ಇದೇ ಈಗ ಆಗಿದೆಯವ್ವ. ಏನೂ ಬೇಡ. ಬರ್ತೇನೆ.

[ಚಂಪಾವತಿ ಹೋಗುವಳು. ಸರೋಜ ಮತ್ತೆ ಕನ್ನಡಿಯ ಹತ್ತಿರ ಹೋಗಿ ತಲೆ ಬಾಚಿಕೊಂಡು, ಹಣೆಗೆ ಕುಂಕುಮವಿಟ್ಟುಕೊಳ್ಳುತ್ತಿದ್ದ ಹಾಗೆ ಸದಾಶಿವ ಆಗಮಿಸುವನು. ಅವನು ದಷ್ಟಪುಷ್ಟ ಶರೀರದ ಎತ್ತರದ ನಿಲುವಿನ ಸ್ಫುರದ್ರೂಪಿ ಯುವಕ. ಖಾದಿಯ ಬುಶ್‌ಕೋಟು, ಪ್ಯಾಂಟುಗಳಲ್ಲಿದ್ದಾನೆ. ಎಡಗೈಯಲ್ಲಿ ರಿಸ್ಟ್‌ವಾಚು. ಬಲಗೈಯಲ್ಲಿ ಅಂದಿನ 'ಸಂಯುಕ್ತ ಕರ್ನಾಟಕ.' ಅವನು ಬಂದದ್ದು ಸರೋಜಳಿಗೆ ಮೊದಲು ಗೊತ್ತಾಗುವುದಿಲ್ಲ. ಅವನು ಅವಳ ದೃಷ್ಟಿಯನ್ನೆಳೆಯಲು ಯತ್ನಿಸುತ್ತಾ ಮೇಜಿನ ಬಳಿ ಹೋಗಿ]

**ಸದಾಶಿವ :**

ಸರೋಜಾ!

**ಸರೋಜ :**

(ಸಂತೋಷದಿಂದ ಅವನತ್ತ ತಿರುಗಿ ಕೊಂಚ ಲಜ್ಜೆಯಿಂದ) ಯಾವಾಗ ಬಂದಿರಿ ಸದಾಶಿವ? ನನಗೆ ಗೊತ್ತೇ ಆಗಲಿಲ್ಲವಲ್ಲ!

**ಸದಾಶಿವ :**

(ಮುಗುಳ್ನಗೆಯಿಂದ) ನಮ್ಮಂಥವರು ಬಂದರೆ ಹ್ಯಾಗೆ ಗೊತ್ತಾದೀತು ನಿನಗೆ?

**ಸರೋಜ:**

(ತುಂಟ ನಗೆಯಿಂದ) ಮತ್ತೆ! ಸ್ವಲ್ಪ ಕೂಡಾ ಸಪ್ಪಳಮಾಡದೆ ಕಳ್ಳರ ಹಾಗೆ ಬಂದರೆ ಗೊತ್ತಾಗುವದಾದರೂ ಹ್ಯಾಗೆ?

**ಸದಾಶಿವ:**

ಮತ್ತೆ! ಸ್ವಲ್ಪ ಕೂಡಾ ಅತ್ತಿತ್ತ ತಿರುಗದೆ ಕಳ್ಳಿಯ ಹಾಗೆ ನಿಂತವರಿಗೆ ಗೊತ್ತಾಗುವದಾದರೂ ಹ್ಯಾಗೆ ಹೇಳು. (ಕುರ್ಚಿಯ ಮೇಲೆ ಕುಳಿತುಕೊಂಡು ನಗುತ್ತಾ ಅವಳನ್ನು ದಿಟ್ಟಿಸುವನು.)

**ಸರೋಜ:**

(ಓರೆನೋಟ ಬೀರುತ್ತಾ) ಸಾಕು ಬಿಡಿರಿ, ಮಾತಿಗೆ ಮಾತು ಆಡುವದರಲ್ಲಿ ಬಲು ಜಾಣರು ನೀವು ಅನ್ನುವದು ನನಗೇನು ಗೊತ್ತಿಲ್ಲವೇನು?

**ಸದಾಶಿವ:**

ನಿನ್ನ ಜಾಣತನದ ಮುಂದೆ ನಮ್ಮದೆಲ್ಲಾ ಏನು ಬಿಡು. ನನ್ನನ್ನು ನೋಡಿದ್ದೇ ತಡ. ಕಳ್ಳ ಅಂತ ಆರೋಪ ಹೊರಿಸಿಬಿಟ್ಟೆಯಲ್ಲ! ನಾನೇನು ಅಂಥ ಕಳ್ಳತನ ಮಾಡಿದ್ದು ನಿನ್ನಲ್ಲಿ?

**ಸರೋಜ:**

(ಪೂರ್ಣ ಲಜ್ಜಿತಳಾಗಿ, ಕೊರಳು ಕೊಂಕಿಸಿ) ಇಶ್ಶ್! ಸಾಕು ಬಿಡಿರಿ. ಸ್ವಲ್ಪ ಇರಿ. ಚಹಕ್ಕಿಟ್ಟು ಬರ್ತೇನೆ.

**ಸದಾಶಿವ:**

(ಎದ್ದು, ಅವಳ ಬಳಿ ಬಂದು) ನೀನು ಹೇಳಿದ್ದೂ ನಿಜ. ನಾನು ಬರುತ್ತಲೂ ನಿನ್ನದೇನೋ ಕಳವಾಗಿ ಹೋದ ಹಾಗಿದೆ.

**ಸರೋಜ:**

(ಸುಮ್ಮನೆ ನಗುವಳು)

**ಸದಾಶಿವ:**

ನಾನು ಚಹ ಕುಡಿಯುವದಿಲ್ಲ ಅನ್ನುವದೂ ಮರೆತುಹೋಯಿತಲ್ಲ ನಿನಗೆ!

ಇಷ್ಟು ಸಲ ನಿಮ್ಮ ಮನೆಗೆ ಬಂದಿದ್ದೇನೆ. ಒಂದು ಸಲ ಆದರೂ ನಾನು ಚಹಾ ಕುಡಿದದ್ದು ನೋಡಿದ್ದೀಯಾ?

**ಸರೋಜ :**

(ಅಣಕದ ನಗೆಯೊಡನೆ) ದೊಡ್ಡ ದೇಶಭಕ್ತರು! ನೀವ್ಯಾಕೆ ಚಹ ಕುಡಿದೀರಿ! ನೀವು ಕುಡಿಯುವದು ಬೇರೆ ಇದೆಯಲ್ಲ!

**ಸದಾಶಿವ :**

(ಬೆಚ್ಚಿ) ಏನು ಮಹಾರಾಯಿತಿ?

**ಸರೋಜ :**

ನಿಮ್ಮಂಥ ದೇಶಭಕ್ತರಿಗಾಗೇ ಹುಟ್ಟಿಕೊಂಡಿದೆಯಲ್ಲ ಆ ನೀ ಹೆಂಡ! ನೀರಾ!

**ಸದಾಶಿವ :**

(ಉಸಿರುಬಿಟ್ಟು) ಅದೇ ಅಲ್ಲವೇ? ಬದುಕಿಕೊಂಡೆ. ನಾನು ಸೆರೆ ಕುಡೀತೇನೆ ಅಂತ ಎಲ್ಲಿ ಹೇಳುತ್ತೀಯೋ ಅಂತ ಹೆದರಿದ್ದೆ. (ಮತ್ತೆ ಕುರ್ಚಿಯ ಮೇಲೆ ಕೂಡುವನು.)

**ಸರೋಜ :**

[ಮೇಜಿನ ಮೇಲೆ ಕೈಯೂರಿ ನಿಂತು] ಏನಾಯಿತು ಸದಾಶಿವ? ಹೋದ ವಾರ ಬಂದಾಗ ಹೇಳುತ್ತಿದ್ದಿರಲ್ಲಾ, ಆ ಪಿ. ಡಬ್ಲ್ಯು. ಡಿ. ನೌಕರಿಯೇನಾದರೂ ಸಿಗುವ ಆಸೆಯಿದೆಯೋ?

**ಸದಾಶಿವ :**

ಈ ನೌಕರಿಗಳಿಗಾಗಿ ಆಸೆಮಾಡಿ ಬಾಯಿ ತೆಗೆದು ಕೂತಿದ್ದರೆ ಕಡೆಯವರೆಗೂ ಕೂಡಬೇಕಾದೀತು, ಹಾಗೇ.

**ಸರೋಜ :**

ಅಂದರೆ? ಇದೂ ಸಿಗಲಿಕ್ಕಿಲ್ಲ ಅಂತೀರಾ?

**ಸದಾಶಿವ :**

ಖಾಲಿಯಿರುವ ನೌಕರಿ ಎರಡು. ಅದಕ್ಕಾಗಿ ಬಂದಿರುವ ಅರ್ಜಿ ಎರಡು

ಸಾವಿರ. ಈ ಎರಡು ಸಾವಿರ ಮಂದಿಯಲ್ಲಿ ನಾನೂ ಒಬ್ಬ. ಇಷ್ಟರ ಮೇಲಿಂದ ತಿಳಿದುಕೊಳ್ಳಬಹುದಲ್ಲ?

**ಸರೋಜ :**

ಚೀಫ್ ಎಂಜಿನಿಯರ ವಶೀಲ ಹಚ್ಚಿದರೆ ಕೆಲಸವಾಗುತ್ತದೆ ಅಂತಿದ್ದಿರಲ್ಲ?

**ಸದಾಶಿವ :**

ಆಗುತ್ತದೆ, ನಿಜ. ಆದರೆ, ವಶೀಲಿಗಾಗಿ ಅವರಿವರ ಬಾಗಿಲು ಕಾದು, ಯಾರು ಯಾರಿಗೋ ಸಲಾಮು ಹೊಡೆದು, ಏನೇನೋ ಮಾತು ಅನ್ನಿಸಿ ಕೊಂಡು ತಲೆ ಕೆಟ್ಟು ಹೋಗಿದೆ ನನಗೆ.

**ಸರೋಜ :**

ನೌಕರಿ ಹುಡುಕುವದೆಂದ ಮೇಲೆ ಇಂಥಾದ್ದೆಲ್ಲಾ ಇರೋದೇ. ತಲೆ ಕೆಡಿಸಿ ಕೊಂಡರೇನು ಉಪಯೋಗ?

**ಸದಾಶಿವ :**

ತಲೆ ಕೆಡಿಸಿಕೋಬಾರದು. ನಿಜ. ನೀ ಹೇಳುವ ಮಾತೂ ನಿಜ. ಆದರೂ.... ಆದರೂ....ನನ್ನ ತಲೆ ಕೆಟ್ಟದ್ದೂ ನಿಜ. ನಿನಗೆ ಗೊತ್ತಿದೆಯಲ್ಲ ಸರೋಜಾ, ಒಂದು ತಿಂಗಳಲ್ಲ, ಎರಡು ತಿಂಗಳಲ್ಲ, ಆರು ತಿಂಗಳಲ್ಲ, ಒಂದೇಸಮನೇ ಎರಡು ವರ್ಷಗಳಿಂದ ಕೈಯಲ್ಲಿ ಅರ್ಜಿ ಹಿಡಿದುಕೊಂಡು ನೌಕರಿಗಾಗಿ ತಿರುಗುತ್ತಾ ಇದ್ದೇನೆ. ಈ ಎರಡು ವರ್ಷಗಳ ಅವಧಿಯಲ್ಲಿ ಸಾವಿರಾರು ನೌಕರಿಗಳಿಗಾಗಿ ಯತ್ನಿಸಿದೆ, ಸಾವಿರಾರು ಅರ್ಜಿಗಳನ್ನು ಹಾಕಿದೆ, ಅರ್ಜಿಯ ಜತೆಗೆ ಕಳಿಸುವ ಫೀಜಿಗಾಗಿ ಸಾವಿರಾರು ರೂಪಾಯಿ ಖರ್ಚು ಮಾಡಿದೆ, ಸಾವಿರಾರು ಜನರ ಬಾಗಿಲು ಕಾದೆ, ಸಾವಿರಾರು ಜನರಿಗೆ ಮೈಸೂರುಪಾಕು, ಉಂಡಿ, ಖಾರಾ, ಚಹ ಕೊಡಿಸಿದೆ, ಇದುವರೆಗೆ ಏನಿಲ್ಲೆಂದರೂ ಮೂರು ಸಾವಿರ ರೂಪಾಯಿಗಳನ್ನಾದರೂ ಖರ್ಚುಮಾಡಿರಬಹುದು ಈ ನೌಕರಿಯ ಬೇಟೆಗಾಗಿ. ಕಡೆಗೂ ಫಲ ಸಿಕ್ಕಲಿಲ್ಲ. ಆಗಲೇ ನೌಕರಿಯ ಹುಚ್ಚು ಬಿಟ್ಟು ಇದೇ ಮೂರು ಸಾವಿರ ರೂಪಾಯಿಗಳನ್ನು ಹೊಲಕ್ಕೆ ಖರ್ಚುಮಾಡಿ

ಹಳ್ಳಿಯಲ್ಲಿದ್ದುಕೊಂಡು ಒಕ್ಕಲುತನ ಮಾಡಿದ್ದರೆ ಮತ್ತೆ ಆರು ಸಾವಿರ ಸಂಪಾದಿಸಬಹುದಾಗಿತ್ತು....

**ಸರೋಜ :**

ನಿಮಗೆ ತಲೆ ಸ್ವಲ್ಪ ಮಾತ್ರವಲ್ಲ, ಪೂರಾ ಕೆಟ್ಟಿರಬೇಕು. ಎಲ್ಲೋ ಮೂರು ನಾಲ್ಕು ಸ್ಕ್ರೂ ಸಡಿಲಾಗಿರಬೇಕು. [ಮೆದುಳನ್ನು ತೋರಿಸಿ ನಗುವಳು]

**ಸದಾಶಿವ :**

ನೌಕರಿಗಾಗಿ ಪಿರಿ ಪಿರಿ ತಿರುಗುವಾಗ ಸಡಿಲಾಗಿದ್ದರೂ ಇರಬಹುದು ಸರೋಜಾ. ಈಗ ಮಾತ್ರ ಎಲ್ಲಾ ನೆಟ್ಟಗಾಗಿದೆ.

**ಸರೋಜ :**

ನೆಟ್ಟಗೆ ಕೆಟ್ಟುಹೋಗಿರಬೇಕು.

**ಸದಾಶಿವ :**

ಹಾ !

**ಸರೋಜ :**

ಬಿ.ಎ. ಪಾಸಾಗಿ ಒಕ್ಕಲುತನ ಮಾಡುವ ವಿಚಾರ ಮಾಡುತ್ತೀರೆಂದ ಮೇಲೆ ನಿಮ್ಮ ತಲೆ ಕೆಡದೆ ಉಳಿದಿದೆಯೆಂದು ಹ್ಯಾಗೆ ಹೇಳಬೇಕು ?

**ಸದಾಶಿವ :**

ಬಿ. ಎ. ಪಾಸಾದವರೆಲ್ಲಾ ನೌಕರಿಯನ್ನೇ ಮಾಡಬೇಕೆಂಬ ನಿಯಮವನ್ನೇನೂ ಯಾರೂ ಮಾಡಿಲ್ಲವಲ್ಲ ಸರೂ ?

**ಸರೋಜ :**

ಮಾಡಿರಲಿಕ್ಕಿಲ್ಲ. ಆದರೂ, ಯಾರು ಯಾವ ಕೆಲಸ ಮಾಡಬೇಕೋ ಅದನ್ನೇ ಮಾಡಿದರೆ ಚೆಂದ. ಒಕ್ಕಲುತನವನ್ನೇ ಮಾಡುವದಾದರೆ ಇಷ್ಟೆಲ್ಲಾ ಖರ್ಚುಮಾಡಿ ಬಿ.ಎ. ವರೆಗೆ ಕಲಿಯುವ ಅಗತ್ಯವೇನು ?

**ಸದಾಶಿವ :**

ಮೊನ್ನೆ ಮೊನ್ನೆಯವರೆಗೂ ನಾನೂ ನಿನ್ನ ಹಾಗೆಯೇ ಯೋಚಿಸುತ್ತಿದ್ದೆ. ನಮ್ಮ ತಂದೆಗೂ ಅದೇ ಆಸೆಯಿತ್ತು. ನಾನು ಬಿ.ಎ. ಪದವಿ ಪಡೆದು

ದೊಡ್ಡ ಆಫೀಸರಾಗುವೆನೆಂದು ಅವನು ಕನಸು ಕಾಣುತ್ತಿದ್ದ. ಅಂತೇ ಒಂದು ಹೊಲವನ್ನು ಮಾರಿ ನನ್ನ ಶಿಕ್ಷಣಕ್ಕೆ ಹಣ ಕೊಟ್ಟ. ನೌಕರಿಗಾಗಿ ಇಷ್ಟು ಕಷ್ಟವಾದೀತೆಂದು ಅವನಿಗೂ ಗೊತ್ತಿರಲಿಲ್ಲ. ಎರಡು ವರ್ಷಗಳಿಂದ ನಾನು ತಿರುಗುವದನ್ನು ನೋಡಿದ ಹಾಗೆ ಅವನಿಗೆಲ್ಲಾ ಗೊತ್ತಾಯ್ತು. ನೌಕರಿಯೂ ಬೇಡ, ಏನೂ ಬೇಡ, ಅದಕ್ಕಾಗಿ ತಿರುಗುವದೂ ಬೇಡ, ಹೊಲ ಮನೆ ನೋಡಿಕೊಂಡು ಸುಖವಾಗಿದ್ದುಕೊಂಡು ಬಿಡು ಅಂತ ಈಗ ಅವನೇ ಹೇಳುತ್ತಿದ್ದಾನೆ. ಅವನಿಗೂ ವಯಸ್ಸಾಯ್ತು. ಮೊದಲಿನಂತೆ ಮೈಯಲ್ಲಿ ಶಕ್ತಿಯಿಲ್ಲ. ಆಳುಗಳಿಂದ ಕೆಲಸವಾಗುವದಿಲ್ಲ. ಅದಕ್ಕೆ ನಾನೇ ಇನ್ನು ಆಳಾಗಿ ದುಡಿಯಬೇಕೆಂದು ನಿಶ್ಚಯಿಸಿದ್ದೇನೆ.

**ಸರೋಜ :**

ನಿಶ್ಚಯ ಅಂದರೆ ಪೂರಾ ನಿಶ್ಚಯವೋ ?

**ಸದಾಶಿವ :**

ಹೌದು. ಇನ್ನು ಮನಸ್ಸು ಬದಲಿಸುವ ಹಾಗಿಲ್ಲ. ಈಗ ನೌಕರಿ ಸಿಕ್ಕಿದರೂ ನಾನು ಅದನ್ನು ಹಿಡಿಯುವದಿಲ್ಲ. ನೌಕರಿ ಅಂದರೆ ಎಷ್ಟಾದರೂ ಪರತಂತ್ರ. ತನ್ನ ಹೊಲದಲ್ಲಿ ತಾನು ದುಡಿದು ಸ್ವತಂತ್ರನಾಗಿರುವದರಲ್ಲಿಯ ಸುಖ ಈ ಹಾಳು ನೌಕರಿಯಲ್ಲಿ ಎಲ್ಲಿಂದ ಬಂದೀತು ?

**ಸರೋಜ :**

ಸರಿ. ಸರಿ. ನೀವೂ ಮುಖಂಡರ ಹಾಗೇ ಮಾತಾಡಲು ಷುರುಮಾಡಿ ಬಿಟ್ಟಿರಿ. [ಅವನ ಕೈಯಲ್ಲಿರುವ ಪತ್ರಿಕೆಯತ್ತ ದೃಷ್ಟಿ ಹೊರಳಿಸಿ] ಹೊಂ. ಪುಢಾರಿಗಳ ಹಾಗೇ ನಿಮ್ಮ ಕೈಗೂ ದಿನಪತ್ರಿಕೆ ಬಂತು. ಇನ್ನು ಗ್ರಾಮೋದ್ಧಾರ.... ರೈತರ ಸೇವೆ....ಸಮಾಜ ಸೇವೆ....ಅಲ್ಲವೇ ? ಸಾಗಲಿ ! ಸಾಗಲಿ !

**ಸದಾಶಿವ :**

[ನೊಂದ ದನಿಯಿಂದ] ನಿನಗೆ ಇದೆಲ್ಲಾ ನಗೆ ಮಾತಾಗಿ ಕಾಣುತ್ತದೆಯಲ್ಲ ಸರೋಜಾ !

**ಸರೋಜ :**

ನಗೆ ಮಾತಲ್ಲದಿನ್ನೇನು? ಅಲ್ರೀ, ನಿಮಗೂ ಯಾಕೆ ಬಡಿದುಕೊಂಡಿತು ಅಂತೀನಿ, ಈ ಹುಚ್ಚು!

**ಸದಾಶಿವ :**

[ವಿಸ್ಮಯದಿಂದ] ಹುಚ್ಚು?

**ಸರೋಜ :**

ಹುಚ್ಚಲ್ಲದಿನ್ನೇನು? ಹಳ್ಳಿಗಳಿಗೆ ಹಿಂತಿರುಗಿರಿ, ಹಳ್ಳಿಗಳಿಗೆ ಹಿಂತಿರುಗಿರಿ ಅಂತ ಗಾಂಧಿಯವರು ಎಷ್ಟು ಸಾವಿರ ಸಲ ಹೇಳಲಿಲ್ಲ ಹಿಂದೆ? ಅವರು ಹೇಳಿದರೆಂದು ಎಷ್ಟು ಜನ ಹೋದರು ಹಳ್ಳಿಗಳಿಗೆ? ಸ್ವತಃ ಗಾಂಧೀಜಿ ಯವರ ಶಿಷ್ಯರೇ ಹೋಗಲಿಲ್ಲ. ಪಟ್ಟಣಗಳಲ್ಲಿ ಬಂಗಲೆಗಳನ್ನು ಕಟ್ಟಿಸಿ ಕೊಂಡು ಸುಖವಾಗಿದ್ದಾರೆ ಎಲ್ಲರೂ. ಇನ್ನು ಕೆಲವರು ಮುಂಬಯಿ, ಮದ್ರಾಸು, ದಿಲ್ಲಿಗಳಂಥ ದೊಡ್ಡ ನಗರಗಳಲ್ಲಿ ಮೆರೆಯುತ್ತಿದ್ದಾರೆ. ನಿಜವಾಗಿ ಹಳ್ಳಿಗಳಿಗೆ ಹೋಗಿ ರೈತರ ಸೇವೆ ಮಾಡುತ್ತಿರುವವರು ಎಷ್ಟು ಮಂದಿ ಯಿದ್ದಾರೋ, ನೀವೇ ಹೇಳಿರಿ.

**ಸದಾಶಿವ :**

ಬಹಳ ಮಂದಿ ಇಲ್ಲ ಅನ್ನುವದೇನೋ ನಿಜ. ಆದರೂ ಕೆಲವರಾದರೂ ಇದ್ದೇ ಇದ್ದಾರೆ. ಆಚಾರ್ಯ ವಿನೋಬಾ ಭಾವೆಯವರು....

**ಸರೋಜ :**

ವಿನೋಬಾಜೀಯವರ ಮಾತು ಬೇರೆ. ಅವರಿಗೇನು ಸಂಸಾರವೆ? ಮನೆಯೇ? ಮಾರೇ? ಅಂಥವರಿಗೆ ಹಳ್ಳಿಯೂ ಅಷ್ಟೇ, ಪಟ್ಟಣವೂ ಅಷ್ಟೆ. ನೀವೇನು ಅವರ ಹಾಗೆ ಸನ್ಯಾಸಿಯಾಗುವವರಲ್ಲವಲ್ಲ?

**ಸದಾಶಿವ :**

ನಾನೇಕೆ ಸನ್ಯಾಸಿಯಾದೇನು? [ಸ್ವಲ್ಪ ತಡೆದು] ನಿನ್ನಂಥ ಸುಂದರ ತರುಣಿ ನನ್ನ ಜೊತೆಗಾತಿಯಾಗುವ ಸಂಭವವಿರುವಾಗ!

**ಸರೋಜ.**

[ನಾಚಿ, ಮುಖ ತಿರುವಿ] ಇಶ್ಶ್ಯ! ಬಿಡಿರಿ, ಬಿಡಿರಿ.

**ಸದಾಶಿವ:**

[ನಗುತ್ತಾ, ಅವಳ ಕೈಹಿಡಿದು] ನಿನ್ನನ್ನು ಬಿಡುವುದಾದರೂ ಹ್ಯಾಗೆ ಸರೋಜಾ? ನಿನ್ನನ್ನು ಬಿಡಬಾರದೆಂದು ನಿನ್ನ ತಾಯಿಯೂ ಹೇಳಿದ್ದರು. ನೆನಪಿಲ್ಲವೇ ನಿನಗೆ? ಸನ್ಯಾಸಿ ವಿನೋಬಾ ಆಗುವದಿಲ್ಲ ನಾನು; ನಿನ್ನ ಕೈಹಿಡಿದು ಸಂಸಾರಿ ಸದೋಬಾ ಆಗುತ್ತೇನೆ.

– ಗೀತೆ –

**ಸದಾಶಿವ:**

ಬಿಡಲಾರೆನೆ ನಾ ನಿನ್ನ। ಬಾ ಬಾರೆ ॥ ಪಲ್ಲ ॥
ಚೆಲುವೆ ನಿನಗೊಲಿದೆ। ಬಲುದಿನದ ಹಿಂದೆ।
ನೀನಾಗು ನನ್ನ ನಲ್ಲೆ!

**ಸರೋಜ:**

ಒಲ್ಲೆ!

**ಸದಾಶಿವ:**

ಸನ್ಯಾಸವೇಕೆ। ತಾಷಾಯವೇಕೆ।
ನೀನಾಗು ನನ್ನ ನಲ್ಲೆ!

**ಸರೋಜ:**

ಒಲ್ಲೆ!

**ಸದಾಶಿವ:**

ಒಪ್ಪಿದೆಯಲ್ಲವೇ, ಸರೋಜಾ?

**ಸರೋಜ:**

[ದೂರ ಸರಿದು ನಿಂತು] ನನಗೀಗಲೇ ಮದುವೆಯಾಗುವ ಇಚ್ಛೆಯಿಲ್ಲ.

**ಸದಾಶಿವ:**

[ಮುಗುಳ್ನಗೆಯಿಂದ] ಮದುವೆಯಾಗುವ ಇಚ್ಛೆಯಿಲ್ಲ! ಏನು ಹಾಗಂದರೆ? ಹದಿನೆಂಟರ ಹರೆಯದ ಹುಡುಗಿಯ ಬಾಯಿಂದ ಇಂಥ ಮಾತು ಬರುತ್ತ

ದೆಂದರೆ ನಂಬಲಿಕ್ಕಾಗುವಂತಿಲ್ಲ. ಸಂಸಾರಿಯಾಗಬೇಕೆಂದು ನಾನು ನಿಶ್ಚಯ ಮಾಡಿರುವಾಗ ಸನ್ಯಾಸಿನಿಯಾಗಬೇಕೆಂದು ನೀನು ನಿಶ್ಚಯಿಸಿಲ್ಲವಷ್ಟೇ?

**ಸರೋಜ**:

[ಗಾಂಭೀರ್ಯದಿಂದ] ಸನ್ಯಾಸಿನಿಯಾಗಲು ನಾನೇನು ಅಕ್ಕಮಹಾದೇವಿಯಲ್ಲ. ಆದರೆ ಇನ್ನೂ ನಾಲ್ಕೈದು ವರ್ಷಗಳವರೆಗೆ ಮಾತ್ರ ಮದುವೆಯ ವಿಚಾರ ಮಾಡಬಾರದೆಂದು ನಿರ್ಧರಿಸಿದ್ದೇನೆ.

**ಸದಾಶಿವ**:

ಮದುವೆಯ ವಿಚಾರವಲ್ಲದಿದ್ದರೆ ಮತ್ತಾವ ವಿಚಾರ ಮಾಡುವವಳು?

**ಸರೋಜ**:

[ಸಮುಮುಗಿಸಿಸಿಂದ] ನೀವು ಗಂಡಸರು ಎಷ್ಟೋ ಸುಶಿಕ್ಷಿತರಾದರೂ ನಿಮ್ಮ ಗುಣವನ್ನು ಬಿಡುವದಿಲ್ಲ. ಹೆಂಗಸರೆಂದರೆ ಮದುವೆಯಾಗಿ ಮಕ್ಕಳನ್ನು ಹೆತ್ತು ಸತ್ತು ಹೋಗಲಿಕ್ಕಷ್ಟೇ ಹುಟ್ಟಿರುವರೆಂದು ನಿಮ್ಮ ಕಲ್ಪನೆಯೋ?

**ಸದಾಶಿವ**:

ಹಾಗೆಲ್ಲ ಕಲ್ಪಿಸಲು ನಾನೇನೂ ಗೊಡ್ಡು ಸನಾತನಿಯಲ್ಲ. ಗಂಡಸಿನಂತೆ ಹೆಂಗಸಿಗೂ ಸಮಾನ ಅವಕಾಶವಿರಬೇಕು, ಸ್ವಂತದ ಸಂಸಾರ ಸಾಗಿಸಿಕೊಂಡು ದೇಶದ ಪ್ರಗತಿಗಾಗಿ ದುಡಿಯುವ ಹಕ್ಕು ಗಂಡಸಿನಂತೆ ಹೆಂಗಸಿಗೂ ಇರಬೇಕು ಎನ್ನುವವರಲ್ಲಿ ನಾನೂ ಒಬ್ಬ. ಹೆಂಗಸರೆಂದರೆ ಬರಿಯ ಮಕ್ಕಳನ್ನು ಹೆರುವ ಯಂತ್ರಗಳಲ್ಲ ಮದುವೆಯೊಂದೇ ಜೀವನದ ಮಹಾ ಪ್ರಸಂಗವಲ್ಲ. ಆದರೆ, ಮದುವೆಯೂ ಅವಶ್ಯ ಎನ್ನುವದನ್ನೂ ಮರೆಯಬಾರದು. ಮದುವೆ ಮಾಡಿಕೊಂಡು ಸಂಸಾರ ನಡೆಸುತ್ತಲೇ ಧ್ಯೇಯ ಸಾಧಿಸಲೂ ಸಾಧ್ಯವಿದೆ.

**ಸರೋಜ**:

ಧ್ಯೇಯದ ಹಾದಿಯಲ್ಲಿ ಮದುವೆಯೊಂದು ಕಾಲ್ತೊಡಕು.

**ಸದಾಶಿವ**:

ಯಾರೋ ಎಲ್ಲಿಯೋ ಹೇಳಿದ್ದನ್ನು ಪಾಠ ಮಾಡಿಕೊಂಡು ಆ ಬಗ್ಗೆ

ಸ್ವಲ್ಪವೂ ವಿಚಾರಮಾಡದೇ ಅದನ್ನೇ ಗಟ್ಟಿಯಾಗಿ ಹಿಡಿದುಕೊಂಡು ಕೂಡುವದು ಜಾಣರ ಲಕ್ಷಣವಲ್ಲ, ಸರೋಜಾ. ಮದುವೆಯಿಲ್ಲದೆಯೂ ಇರಬಹುದೆನ್ನುವದನ್ನು ನಾನೂ ಒಪ್ಪಬಹುದು. ಆದರೆ, ಅದಕ್ಕೂ ಸಹ ಸರಿಯಾದ ವಾತಾವರಣ ಬೇಕು. ಇಲ್ಲಿ ನೋಡಿದರೆ ನೀನೊಬ್ಬಳೇ ಒಬ್ಬಳು. ಈ ದೊಡ್ಡ ಪಟ್ಟಣದಲ್ಲಿ ನಿನ್ನಂಥ ಅವಿವಾಹಿತ ಯುವತಿ ಬಾಳ್ವೆ ಮಾಡುವದೇನು ಹುಡುಗಾಟದ ಮಾತಲ್ಲ.

**ಸರೋಜ :**

ಯಾಕೆ? ಯಾರಾದರೂ ನನ್ನನ್ನು ನುಂಗುವರೋ? ನನ್ನ ಶೀಲ, ನನ್ನ ಚಾರಿತ್ರ್ಯ ನನ್ನ ಮುಷ್ಟಿಯಲ್ಲಿದೆ. ನನ್ನಂಥವಳಿಗೆ ಯಾರೂ ಏನೂ ಮಾಡಲಾರರು.

**ಸದಾಶಿವ :**

ಸ್ವಭಾವತಃ ನೀನು ದೃಢವಾದ ಚಾರಿತ್ರ್ಯದವಳೆನ್ನುವದು ನನಗೆ ಗೊತ್ತು. ಆದರೆ, ಪ್ರಸಂಗಗಳು ಯಾವಾಗಲೂ ಮೊದಲೇ ನೋಟೀಸು ಕೊಟ್ಟು ಬರುತ್ತವೆಯೇ ಸರೋಜಾ? ಪಟ್ಟಣವೆಂದರೆ ಅಲ್ಲಿ ಪುಂಡರಿರುತ್ತಾರೆ, ಗುಂಡರಿರುತ್ತಾರೆ, ಮೋಸಗಾರರಿರುತ್ತಾರೆ, ಕಪಟಿಗಳಿರುತ್ತಾರೆ. ಒಬ್ಬಳೇ ಒಬ್ಬಳಾಗಿ ಎಷ್ಟು ದಿನ ಅಂತ ನೀನಿಲ್ಲಿ ಇರಬಲ್ಲೆ? ಹೆಣ್ಣು ಜೀವಕ್ಕೊಂದು ಗಂಡಿನ ಜೊತೆ ಬೇಕೇಬೇಕು.

**ಸರೋಜ :**

ಮೊದಲು ಬರಿಯ ಜೊತೆಯೆಂದು ನಂಬಿದ್ದು ಮುಂದೆ ಸೆರೆಮನೆಯಾಗುತ್ತದೆ. ಗಂಡಸಿನ ದಾಸ್ಯದಲ್ಲಿರುವದೂ ಒಂದೇ, ಮುಳ್ಳಿನ ಹಾಸಿಗೆಯ ಮೇಲಿರುವದೂ ಒಂದೇ.

**ಸದಾಶಿವ :**

ಮತ್ತೆ ಆರಂಭವಾಯಿತು ಯಾರದೋ ಭಾಷಣದ ಗ್ರಾಮಾಫೋನ್ ರಿಕಾರ್ಡು. ಈ ಹುಚ್ಚು ನಿನಗೆಲ್ಲಿ ಹಿಡಿಯಿತೇ ಸರೋಜಾ? ಇಲ್ಲಿದ್ದು ನೀನು ಮಾಡುವದಾದರೂ ಏನನ್ನು?

**ಸರೋಜ**,

ನನ್ನ ತಾಯಿಯಂತೆ ನಾನೂ ಮಾಸ್ತರತಿಯಾಗುತ್ತೇನೆ.

**ಸದಾಶಿವ**:

ಮಾಸ್ತರತಿಯ ಕೆಲಸ ಸಿಗುತ್ತವೇನು?

**ಸರೋಜ**:

ಪ್ರಯತ್ನಮಾಡುತ್ತಾ ಇದ್ದೇನೆ. ಟೋಪಿ ಶಾಂತಣ್ಣನವರು ಸಹಾಯಮಾಡಿ ಕೊಡಿಸುವದಾಗಿ ಮಾತುಕೊಟ್ಟಿದ್ದಾರೆ.

**ಸದಾಶಿವ**:

(ಪರಿಹಾಸ್ಯದಿಂದ) ಟೋಪಿ ಶಾಂತಣ್ಣ.....ಅವನ ಸಹಾಯ....(ನಗುವನು) ಎಲ್ಲರಿಗೂ ಟೋಪಿ ಹಾಕುತ್ತಾ ತಿರುಗುವ ಟೋಪಿ ಶಾಂತಣ್ಣ....ಅವನಿಂದ ನಿನಗೆ ಸಹಾಯ! (ಗಟ್ಟಿಯಾಗಿ ನಗುವನು) ಟೋಪಿ ಶಾಂತಣ್ಣ! ಟೋಪಿ ಶಾಂತಣ್ಣ! (ಮತ್ತೆ ನಗುವನು)

**ಸರೋಜ**:

(ಅರ್ಧ ಆಶ್ಚರ್ಯದಿಂದ, ಅರ್ಧ ಕೋಪದಿಂದ) ಯಾಕ್ರೀ, ಹೀಗೆಲ್ಲ ಆಡುತ್ತೀರಿ ಅವರ ಬಗ್ಗೆ? ಅವರೇನು ಮಾಡಿದ್ದಾರೆ ನಿಮಗೆ?

**ಸದಾಶಿವ**:

ನನಗೇನೂ ಮಾಡಿಲ್ಲ ಅವರು, ನಿಜ. ನನಗೇನೂ ಟೋಪಿ ಹಾಕಿಲ್ಲ. ಅಂಥಾ ಪ್ರಸಂಗವೇ ಬಂದಿಲ್ಲ. ಪ್ರಸಂಗ ಬಂದಿದ್ದರೆ ಮಾತ್ರ ಅವರು ನನಗೂ ಟೋಪಿ ಹಾಕದೆ ಬಿಡುತ್ತಿರಲಿಲ್ಲ. ನಿನಗೆ ಗೊತ್ತಿಲ್ಲವೇ ಸರೋಜಾ? ಅವರ ಅಪ್ರಾಮಾಣಿಕತನದ ವಿಷಯ ನಿನಗೆ ಗೊತ್ತಿಲ್ಲವೇ? ಎಷ್ಟೋ ರೈತರು ಅವರನ್ನು ನಂಬಿ ಮನೆಮಾರು ಕಳೆದುಕೊಂಡು ನಿರ್ಗತಿಕರಾಗಿದ್ದಾರೆ. ಶಾಂತಣ್ಣನವರಿಂದಾಗಿ ಎಷ್ಟೋ ಒಕ್ಕಲಿಗರ ಹೊಲಗಳು ಅವರ ಕೈಬಿಟ್ಟಿವೆ. ಪಕ್ಷಗಾರರ ಪಕ್ಷ ಹಿಡಿದು ಅವರಿಗಾಗಿ ಏಕನಿಷ್ಠೆಯಿಂದ ಕೆಲಸ ಸಾಗಿಸಿ ಖಟ್ಲೆಗಳನ್ನು ಗೆಲ್ಲಬೇಕಾದುದು ವಕೀಲರಾದವರ ಧರ್ಮ. ನಿನ್ನ ಈ ಶಾಂತಣ್ಣನವರ ವಕೀಲಿಯ ರೀತಿ ಮಾತ್ರ ಎಲ್ಲಾ ತಿರುವುಮುರುವು. ಪ್ರತಿವಾದಿಗಳಿಂದ

ಲಂಚ ತಿಂದು ತಮ್ಮ ಪಕ್ಷಗಾರರನ್ನೇ ಮುಳುಗಿಸುವ ಮಹಾನುಭಾವನೀತ. ಇಂಥ ಅನ್ಯಾಯದಿಂದಲೇ ಹಣ ಮಾಡಿಕೊಂಡು ಇಲ್ಲಿ ದೊಡ್ಡ ದೊಡ್ಡ ಮನೆಗಳನ್ನು ಕಟ್ಟಿಸಿದ ಶಾಂತಣ್ಣ. ಮೋಟಾರು ಕಾರು ಕೊಂಡುಕೊಂಡ. ಬರಿಯ ವಕೀಲಿಯಲ್ಲಷ್ಟೆ ಅಲ್ಲ, ಸಾರ್ವಜನಿಕ ಕ್ಷೇತ್ರದಲ್ಲೂ ಟೋಪಿ ಹಾಕುವ ವ್ಯವಹಾರ ನಡೆಸಿ ಶ್ರೀಮಂತನಾದ. ಅವನು ಸ್ಥಾಪಿಸಿದ "ಸಮಾಜಸೇವಾ ಸಂಘ"ದ ಕತೆ ನಿನಗೆ ಗೊತ್ತಿಲ್ಲವೇ?

**ಸರೋಜ:**

ಇಲ್ಲ. ನನಗ್ಯಾತಕ್ಕೆ ಆ ಉಸಾಬರಿ?

**ಸದಾಶಿವ:**

ಸ್ವತಂತ್ರ ಜೀವನ ಸಾಗಿಸುತ್ತಾ ಸಮಾಜಸೇವೆ ಮಾಡಬೇಕೆನ್ನುವ ನಿನಗೆ ಸಾಮಾಜಿಕ ಸಂಸ್ಥೆಗಳ ಉಸಾಬರಿಯೆಲ್ಲಾ ತಿಳಿದಿರಲೇಬೇಕು. ಈ ಸಂಸ್ಥೆಗಳನ್ನು ನಡಸುವ ನೆಪದಲ್ಲಿ ದೊಡ್ಡ ಮನುಷ್ಯರಾಗಲು ಯತ್ನಿಸುವ ಟೋಪಿ ಶಾಂತಣ್ಣನವರಂಥಾ ಗೋಮುಖ ವ್ಯಾಘ್ರಗಳ ಉಸಾಬರಿಯೂ ಗೊತ್ತಿರಬೇಕು. ಸಮಾಜದ ಸೇವೆಗೆಂದು ಈ ಸಂಸ್ಥೆಯನ್ನು ಸ್ಥಾಪಿಸಿ ಅದರ ಕಾರ್ಯದರ್ಶಿಸ್ಥಾನ ಹಿಡಿದುಕೊಂಡು, ಇಪ್ಪತ್ತು ಸಾವಿರ ರೂಪಾಯಿ ಕೂಡಿಸಿದ್ದನಲ್ಲಾ ಈ ಶಾಂತಣ್ಣ. ಅದೆಲ್ಲಾ ಏನಾಯಿತು ಗೊತ್ತೇನು ನಿನಗೆ?

**ಸರೋಜ:**

ಏನಾಯಿತು?

**ಸದಾಶಿವ:**

ಆ ಸಂಸ್ಥೆ ಹುಟ್ಟಿ ಆಗಲೇ ಐದು ವರ್ಷವಾಗುತ್ತ ಬಂತು. ಇದುವರೆಗೆ ಅದರ ಚಟುವಟಿಕೆಯೂ ಇಲ್ಲ. ಲೆಕ್ಕ ಪತ್ರವೂ ಇಲ್ಲ. ಇಪ್ಪತ್ತು ಸಾವಿರವನ್ನೆಲ್ಲಾ ಶಾಂತಣ್ಣ ಸ್ವಾಹಾ ಮಾಡಿಬಿಟ್ಟಿದ್ದಾನೆ.

**ಸರೋಜ:**

ಸುಳ್ಳು. ಇದನ್ನೆಲ್ಲ ನಾನು ನಂಬುವದಿಲ್ಲ. ಆ ಹಣವನ್ನು ಅವನು ತಿಂದು ಹಾಕಿದನೆನ್ನುವದಕ್ಕೆ ಆಧಾರವಾದರೂ ಏನು?

**ಸದಾಶಿವ :**

ಲೆಕ್ಕಪತ್ರ ಪ್ರಕಟಿಸಬೇಕೆಂದು ಮೂರು ವರ್ಷಗಳಿಂದ ಸದಸ್ಯರು ಬೊಬ್ಬಾಟ ನಡೆಸಿದ್ದಾರೆ. ಇಪ್ಪತ್ತು ಸಾವಿರಕ್ಕೆಲ್ಲ ಯಾತಕ್ಕೆ ಬೇಕು ಲೆಕ್ಕ? ಹಣ ಕೂಡಿಸಲು ತಿರುಗಾಡಿದ್ದಕ್ಕೇ ಸಾಕಾಗಲಿಲ್ಲ ಇಪ್ಪತ್ತು ಸಾವಿರ, ತನ್ನ ಕಿಸೆಯಿಂದ ಇನ್ನೂ ಸಾವಿರಾರು ಹೋಗಿದೆ ಏನ್ನುತ್ತಾನೆ ಶಾಂತಣ್ಣ.

**ಸರೋಜ :**

ಅವರು ಹೇಳುವ ಮಾತು ನಿಜವಲ್ಲ ಅಂತ ಹ್ಯಾಗೆ ಹೇಳಬೇಕು? ಮೋಟಾರು ಕಾರು, ಪೆಟ್ರೋಲು, ಡ್ರೈವರನ ಸಂಬಳ, ಭತ್ತೆ, ಅದು ಇದು ಅಂತ ಹಣ ಖರ್ಚಾಗಿರಬಹುದು.

**ಸದಾಶಿವ :**

ಸರಿ. ನೀನೂ ಅವರ ಪಕ್ಷವನ್ನೇ ಹಿಡಿದಂತೆ ವಾದಿಸುತ್ತಿರುವೆ. ಅವರೇನೋ ನಿನ್ನನ್ನು ಮರುಳುಮಾಡಿದಂತೆ ತೋರುತ್ತದೆ. ನೀನಿನ್ನೂ ಅನನುಭವಿತ ಹುಡುಗಿ. ಏನು ಮಾಡುವದು?

**ಸರೋಜ :**

ನೀವು ತಿಳಿದಿರುವಷ್ಟೇನು ಅನನುಭವಿತಳಲ್ಲ ನಾನು. ನನಗೂ ದೇವರು ಬುದ್ಧಿಯನ್ನು ಕೊಟ್ಟಿದ್ದಾನೆ, ತಿಳುವಳಿಕೆಯನ್ನೂ ಕೊಟ್ಟಿದ್ದಾನೆ.

**ಸದಾಶಿವ :**

ವ್ಯವಹಾರಜ್ಞಾನವನ್ನು ಮಾತ್ರ ದೇವರು ಕೊಡುವದಿಲ್ಲ. ಪ್ರಪಂಚದ ಪೇಟಿಯಲ್ಲಿ ಪ್ರತಿಯೊಬ್ಬರೂ ಸ್ವಾನುಭವದಿಂದ ಅದನ್ನು ಕಲಿಯಬೇಕಾಗುತ್ತದೆ. ಟೋಪಿ ಶಾಂತಣ್ಣನಂಥವರು ವ್ಯವಹಾರದಲ್ಲಿ ಪಳಗಿದ ಹುಲಿಗಳು. (ಕೊಂಚ ತಡೆದು) ಅವನ ಮನೆಯಲ್ಲಿ ಹೆಂಡತಿಯಿದ್ದಾಳೆ, ಒಂದು ಡಜನ್ ಮಕ್ಕಳಿವೆ. (ಮತ್ತೆ ತಡೆದು, ಉಗುಳು ನುಂಗಿ) ನಿನ್ನ ಮುಂದೆ ಇಂಥ ಮಾತು ಆಡಲು ಮನಸ್ಸಿಲ್ಲ. ಆದರೂ ಈಗ ಆಡಲೇಬೇಕಾಗಿ ಬಂದಿದೆ. ಶಾಂತಣ್ಣನ ಬಗ್ಗೆ ನಿನಗಿರುವ ಭ್ರಾಂತಿಯನ್ನು ದೂರಗೊಳಿಸದಿದ್ದರೆ, ನನ್ನ ಕರ್ತವ್ಯದಲ್ಲ

ನಾನು ತಪ್ಪಿದಂತಾದೀತು. (ಸುತ್ತ ತಡೆದು) ಶಾಂತಣ್ಣನೆಂದರೆ ದೊಡ್ಡ ಸತ್ಪುರುಷನೆಂದು ನೀನು ತಿಳಿದಿರುವೆಯಲ್ಲವೆ? ಅವನೆಂಥಾ ಸತ್ಪುರುಷನೆನ್ನುವದು ಈ ಪಟ್ಟಣಕ್ಕೆಲ್ಲ ಗೊತ್ತಿದೆ. ನಿಮ್ಮ ತಾಯಿಗೂ ಗೊತ್ತಿತ್ತು. ಮನೆಯಲ್ಲಿ ಹೆಂಡತಿಯಿದ್ದರೂ ಈ ಶಾಂತಣ್ಣ ಹೊರಗಡೆ....

**ಸರೋಜ :**

(ಬೆಚ್ಚಿ) ಹೊರಗಡೆ!

**ಸದಾಶಿವ .**

(ಕನಿಕರದಿಂದ) ಅಯ್ಯೋ ಹುಚ್ಚ! ನಿನಗಿನ್ನೂ ಗೊತ್ತೇ ಇರಲಿಲ್ಲವೇ? ನಿನಗೆ ವ್ಯವಹಾರಜ್ಞಾನವಿಲ್ಲವೆಂದು ನಾನು ಸುಮ್ಮನೆ ಹೇಳಲಿಲ್ಲ. ಈ ಶಾಂತಣ್ಣ ಮಹಾ ವ್ಯಭಿಚಾರಿ. ಈ ಊರಲ್ಲೇ ನಾಲ್ಕೈದು ಜನ ಹೆಂಗಸರನ್ನಿಟ್ಟುಕೊಂಡಿದ್ದಾನೆ.

**ಸರೋಜ :**

ಹಾ!

**ಸದಾಶಿವ .**

ಹೌದು, ಹೌದು. ನಾನು ಹೇಳುವದರಲ್ಲಿ ಸುಳ್ಳೇನೂ ಇಲ್ಲ. ನಿನ್ನ ಗೆಳತಿ ಚಂಪಾವತಿಯಿದ್ದಾಳಲ್ಲಾ, ಅವಳನ್ನೇ ಕೇಳಿ ನೋಡು ಬೇಕಾದರೆ! (ಸ್ವಲ್ಪ ತಡೆದು) ಅವನ ಪ್ರೇಯಸಿಯರಲ್ಲಿ ಅವಳೂ ಒಬ್ಬಳು!

**ಸರೋಜ :**

ಚಂಪಾವತಿ! ಶಾಂತಣ್ಣನ ಪ್ರೇಯಸಿ! ನಾನಿದನ್ನೆಲ್ಲ ನಂಬುವದಿಲ್ಲ.

**ಸದಾಶಿವ .**

ಕೇಳಿ, ತಿಳಿದು, ಮನವರಿಕೆ ಮಾಡಿಕೊಂಡ ಮೇಲೆ ನಂಬು. ಈಗಲೇ ನಂಬಬೇಕೆಂದು ನಾನೇನೂ ಹೇಳುವದಿಲ್ಲ. ಆದರೊಂದೇ ಮಾತು ಸರೋಜಾ, ತಿಳಿದುಕೊಳ್ಳುವದಕ್ಕೆ ಮೊದಲೇ ಇಂಥಾ ಆಷಾಢಭೂತಿಗಳ ಬಲೆಗೆ ಬಿದ್ದು ಮೋಸಹೋಗಬೇಡ. ಅದಕ್ಕಾಗೇ ನಾನು ನಿನ್ನನ್ನೀಗ ಎಚ್ಚರಿಸಿದ್ದು.

**ಸರೋಜ :**

ನಿಮ್ಮ ಸಲಹೆಗಾಗಿ ಬಹಾಳ ಬಹಾಳ ಥ್ಯಾಂಕ್ಸ್ !

**ಸದಾಶಿವ :**

(ಜಾಗಿ, ನಗುತ್ತಾ) ನೋ ಮೆನ್ಷನ್ ! ಹೂಂ! ಕಡೆಗೆ ನನಗೇನು ಅಪ್ಪಣೆ ದೇವಿಯವರದು ?

**ಸರೋಜ :**

[ನಗೆಯನ್ನು ಹತ್ತಿಕ್ಕಿಕೊಳ್ಳುತ್ತಾ] ದೇವಿಯವರು ಯಾವ ಅಪ್ಪಣೆಯನ್ನೂ ಕೊಡ ಬಯಸುವದಿಲ್ಲ.

**ಸದಾಶಿವ :**

ದೇವಿಯವರು ಈ ಬಡಭಕ್ತನನ್ನು ಹೀಗೆ ನಿರಾಶೆಗೊಳಿಸಬಾರದು. ನಿಮ್ಮ ವರಕ್ಕಾಗಿ ನಾಲ್ಕು ವರ್ಷಗಳಿಂದ ಕಾಯುತ್ತಿದ್ದೇನೆ.

**ಸರೋಜ :**

ಕಾಯಬೇಕೆಂದು ನಾನೇನು ಹೇಳಿರಲಿಲ್ಲ.

**ಸದಾಶಿವ :**

ಬಾಯಿಬಿಟ್ಟು ಹೇಳಿಲ್ಲವೆಂಬುದೇನೋ ನಿಜ. ಕಣ್ಣುಬಿಟ್ಟು ಹೇಳಿಲ್ಲವೇ ಎಷ್ಟೋ ಸಲ? ನಿಮ್ಮ ತಾಯಿಯ ಎದುರಿಗೇ ಒಮ್ಮೆ ಈ ಮಾತು ಬಂದಿತ್ತು. ಅವರೂ ಒಪ್ಪಿಕೊಂಡಿದ್ದರು. (ಅವಳ ಹತ್ತಿರ ಬಂದು) ನಿನಗೆ ನೆನಪಿಲ್ಲವೆ ಸರೋಜಾ, ಆರು ತಿಂಗಳ ಹಿಂದೊಂದು ದಿನ ನಾವಿಬ್ಬರೂ ಇಲ್ಲೇ ಈ ರೂಮಿನಲ್ಲೇ ಮಾತಾಡುತ್ತ ಕುಳಿತಾಗ ಸಾಲೆಯಿಂದ ಒಂದ ನಿಮ್ಮ ತಾಯಿ ನಮ್ಮಿಬ್ಬರನ್ನೂ ಕಂಡು ಆನಂದದಿಂದ ಮುಖ ಅರಳಿಸಿ ಥಟ್ಟನೆ ಒಂದು ಮಾತು ಆಡಿದ್ದರು. "ಹ್ಯಾಗೆ ಸೊಗಸಾಗಿ ಒಪ್ಪುತ್ತದೆ ಜೋಡಿ! ಸಾವಿತ್ರೀ ಸತ್ಯವಾನರ ಹಾಗೆ" ಅಂತ. ಅಂದಿನಿಂದ ಈ ಸತ್ಯವಾನ ತನ್ನ ಈ ಸಾವಿತ್ರಿ ಗಾಗಿ ಕಾತರನಾಗಿ ಕಾಯುತ್ತಿದ್ದಾನೆ.

**ಸರೋಜ :**

ಸತ್ಯವಾನನ ಹಿಂದೆ ಹಾಳು ಹಳ್ಳಿಯಲ್ಲಿ ಕಾಡುಗುಡ್ಡದಲ್ಲಿ ಅಲೆಯಲು ಮನಸ್ಸಿಲ್ಲ ಈ ಸಾವಿತ್ರಿಗೆ.

**ಸದಾಶಿವ :**

ಹಳ್ಳಿ ಅಂದರೆ ನಿನಗ್ಯಾಕೆ ಇಷ್ಟೊಂದು ಬೇಸರವೋ ನನಗಂತೂ ತಿಳಿಯುವದಿಲ್ಲ. ಹಳ್ಳಿ ಇಲ್ಲದಿದ್ದರೆ ನೀನೆಲ್ಲಿ ಬದುಕಿರುತ್ತಿದ್ದೆ ಮಳ್ಳೀ! ನಾವು ಜೀವ ಹಿಡಿದುಕೊಂಡಿರುವದು ಹಳ್ಳಿಯಿಂದ ಬರುವ ಕಾಳಿನಿಂದ. ನಾವು ಮೈ ಮುಚ್ಚಿಕೊಂಡಿರುವದು ಹಳ್ಳಿಯ ಹತ್ತಿಯಿಂದ ತಯಾರಾದ ಬಟ್ಟೆಯಿಂದ. ಹೊಲದಲ್ಲಿ ದುಡಿಯುವ ರೈತನೆಂದರೆ ಲೋಕವನ್ನೆಲ್ಲ ಕಾಪಾಡುವ ಅನ್ನದಾತ....

**ಸರೋಜ :**

ಸಾಕು, ಸಾಕು. ನಿಮ್ಮ ಲೆಕ್ಚರು ಇಷ್ಟಕ್ಕೇ ಸಾಕು. ಆ ಕಗ್ಗಹಳ್ಳಿ ಅಂದರೆ ನನಗಂತೂ ಆಗುವದಿಲ್ಲ. ಮಲ್ಲಣ್ಣ ಎಷ್ಟೋ ಒತ್ತಾಯಮಾಡಿ ಕರೆಯಲಿಕ್ಕೆ ಬಂದಿದ್ದ. ನಾನೇ ಹೋಗಲಿಲ್ಲ.

**ಸದಾಶಿವ :**

ಮಲ್ಲಣ್ಣ ನನಗೂ ಭೆಟ್ಟಿಯಾಗಿದ್ದ ಮೊನ್ನೆ. ಎಲ್ಲಾ ಹೇಳಿ ಬಹಳ ದುಃಖಪಟ್ಟುಕೊಂಡ. ಇಲ್ಲಿ ಒಬ್ಬಳೇ ಇರುವದಕ್ಕಿಂತ ಅಲ್ಲಿ ಹಳ್ಳಿಯಲ್ಲಿ ಅಣ್ಣನ ಮನೆಯಲ್ಲಿರುವದೊಳ್ಳೆಯದಲ್ಲವೇನು ?

**ಸರೋಜ :**

ಏನು ಒಳ್ಳೆಯದೋ. ಅಲ್ಲೇನಿದೆಯಂತ ಹೊತ್ತು ಹೋಗಬೇಕು? ಏನು ಸಿನಿಮಾನೇ? ನಾಟಕಾನೇ?

**ಸದಾಶಿವ :**

ಅಲ್ಲಿ ಸಿನಿಮಾ ಇಲ್ಲವಾದರೂ ನಾಟಕಗಳಿಗೇನು ಕೊರತೆ? ಆಗಾಗ ಬಯಲಾಟ ಆಗೇ ಆಗುತ್ತದೆ.

**ಸರೋಜ :**

ಥೂ. ಆ ಹೊಲಸು ಬಯಲಾಟಗಳನ್ನು ಯಾರು ನೋಡಿಯಾರು? ಎಲ್ಲಾ ಹಳೆಯ ಗೊಡ್ಡು ಕತೆಗಳು, ವಿಚಿತ್ರ ವೇಷಗಳು, ವಿಚಿತ್ರ ಮಾತುಗಳು, ವಿಚಿತ್ರ ಹಾಡುಗಳು. ಇನ್ನು ಆ ಕುಣಿತವೋ ದೆವ್ವಗಳ ಕುಣಿತ. ಇಂಥಾ ಬಯಲಾಟ ಯಾರು ನೋಡಿಯಾರು?

**ಸದಾಶಿವ :**

ಯಾರು ಅಂದರೆ ಹಳ್ಳಿಯ ಜನರು. ಅವರಿಗೆ ಅಂಥ ಬಯಲಾಟಗಳಿಂದಲೂ ತೃಪ್ತಿಯಾಗುತ್ತದೆ. ದುಡಿದು ದುಡಿದು ದಣಿದ ಅವರ ಮನರಂಜನೆಯಾಗಲು ಇಂಥ ಬಯಲಾಟಗಳೂ ಸಾಕು. ಪಟ್ಟಣದವರಂತೆ ಹಳ್ಳಿಗರಿಗೆ ಹೆಚ್ಚಿನ ಆಸೆಯಿಲ್ಲ.

**ಸರೋಜ :**

ಏನೋ ಹುಂಬತನದ ಜೀವನ.

**ಸದಾಶಿವ .**

ಆ ಬಾಳಿನಲ್ಲಿರುವ ಸ್ವಾರಸ್ಯ ಇಲ್ಲಿಯ ನಾಗರಿಕರಿಗೆಲ್ಲಿಂದ ಬರಬೇಕು? ಹೋಗಲಿ ಬಿಡು. ಸದ್ಯಕ್ಕಂತೂ ನಿನ್ನ ದೃಷ್ಟಿ ಬದಲಾಗುವಂತೆ ಕಾಣುವದಿಲ್ಲ. ನಾನಿನ್ನು ಹೊರಡಲೇ?

**ಸರೋಜ :**

ಮತ್ತೆ ಯಾವಾಗ ಬರುತ್ತೀರಿ?

**ಸದಾಶಿವ .**

ತೋಟದಲ್ಲಿ ಕಾಯಿಪಲ್ಯೆ ಹಾಕಿದ್ದೇವೆ. ಅದನ್ನು ಮಾರಲು ವಾರಾವಾರಾ ಬರಬೇಕಾಗುತ್ತದಲ್ಲ.

**ಸರೋಜ :**

ಬಂದಾಗಲೆಲ್ಲಾ ಬರುತ್ತಾ ಇರಿ.

**ಸದಾಶಿವ :**

ನೋಡೋಣ. ಸಮಯ ಸಿಕ್ಕಿದರೆ ಬರುತ್ತೇನೆ.

**ಸರೋಜ :**

(ಸೊಂಡುಕೊಂಡು) ಯಾಕೆ? ಸಿಟ್ಟು ಬಂತೇನು?

**ಸದಾಶಿವ :**

ಸಿಟ್ಟ್ಯಾಕೆ ಬರಬೇಕು?

# ಮೊ ದ ಲ ನೆ ಯ ಅಂ ಕ

**ಸರೋಜ :**

ನಾನು ಹಾಗೆಲ್ಲಾ ಆಡಿದೆ ಅಂತ....

**ಸದಾಶಿವ :**

ನೀನು ಹೇಗಾಡಿದರೂ ನನಗೆ ಸಿಟ್ಟು ಬರುವದಿಲ್ಲ ಸರೋಜಾ. ವ್ಯಸನವಾಗುತ್ತದಷ್ಟೆ. ನೀನೊಬ್ಬಳೆ ಇಲ್ಲಿ ಹೇಗಾದರೂ ಇರುತ್ತೀಯೆ ಅಂತ....

**ಸರೋಜ :**

(ನಕ್ಕು) ಮತ್ತೆ ಮತ್ತೆ ಅದೇ ಮಾತೇ. ನಾನೇನು ಕೂಸೇ ಅಂಜಲಿಕ್ಕೆ ? ನೆರೆಹೊರೆಯಲ್ಲಿ ಜನರಿಲ್ಲವೇ ? ಇದೇನು ಅಡವಿಯೇ ?

**ಸದಾಶಿವ :**

ಸರಿ, ಸರಿ. ಅಂತೂ ನೀನು ಸುಖವಾಗಿರಬೇಕೆಂಬುದೇ ನನ್ನ ಇಚ್ಛೆ.

[ವ್ಯಸನದಿಂದ ತಲೆಬಾಗಿಸಿ ಹೊರಡುವನು. ಸರೋಜ ಏನನ್ನೊ ಹೇಳಲು ಬಾಯಿತೆರೆದು ಅವನನ್ನು ಕೂಗಲು ಯೋಚಿಸಿ, ಬಾಗಿಲಿನವರೆಗೂ ಹೋಗಿ ಮತ್ತೇ ಯೋಚನೆ ಬದಲಿಸಿ ಕೈ ಚೆಲ್ಲಿ ಬಂದು ಕುರ್ಚಿಯ ಮೇಲೆ ಕುಳಿತುಕೊಳ್ಳುವಳು. ಹಠಾತ್ತಾಗಿ ಅವಳಿಗೆ ಅಳು ವುಕ್ಕಿ ಬರುವುದು. ಬಿಕ್ಕುತ್ತಾ ಮೇಜಿನ ಮೇಲೆ ತಲೆಯೊರಗಿಸುವಳು.

ಹೊರಗಡೆ ಮೋಟಾರು ಹಾರನ್ ಸದ್ದಾಗುವುದು. ಅದು ಅವಳ ಲಕ್ಷ್ಯಕ್ಕೆ ಬರುವುದಿಲ್ಲ. ಬಾಗಿಲಲ್ಲಿ ಟೋಪಿ ಶಾಂತಣ್ಣನ ಮೂರ್ತಿ ಕಾಣುವುದು. ನಿಧಾನವಾಗಿ, ಸದ್ದಾಗದಂತೆ ನಡೆಯುತ್ತಾ ಅವನು ಮುಂದೆ ಬರುವನು. ಅವನು ಕ್ಲೋಸ್ಡ್ ಕಾಲರಿನ ಕಪ್ಪು ಕೋಟು ತೊಟ್ಟು ತೆಳ್ಳನೆಯ ದೋತರವುಟ್ಟಿದ್ದಾನೆ. ಕಾಲುಗಳಲ್ಲಿ ಹೊಳೆಯುವ ಷೂಸು. ಕೈಯಲ್ಲಿ ಚಿನ್ನದ ಪಟ್ಟಿಯ ಗಡಿಯಾರ. ಬೆರಳುಗಳಲ್ಲಿ ಉಂಗುರಗಳು. ಫ್ರೆಂಚ್ ಕಟ್ ಮೀಸೆ; ಅವನು ನಕ್ಕಾಗಲೆಲ್ಲ ಅದು ಕುಣಿಯುತ್ತದೆ. ತಲೆಯ ಮೇಲೆ ಉದ್ದವಾದ ಕಪ್ಪು ಟೋಪಿ ಎದ್ದು ಕಾಣುತ್ತದೆ. ಬಲಗೈಯಲ್ಲಿ ಬಣ್ಣದ ಕೋಲು. ಅದನ್ನು ಠೀವಿಯಿಂದ ತಿರುಗುತ್ತಾ ಅವನು ಬಂದು ಸರೋಜಳ ಅಳುವನ್ನು ಕಂಡು ದಿಗಿಲುಗೊಂಡವನಂತೆ ನಟಿಸಿ, ಕಣ್ಣು ಅರಳಿಸಿ ಮೆಲ್ಲಗಿನ ದನಿಯಲ್ಲಿ :]

**ಶಾಂತಣ್ಣ :**

ಸರೋಜಾ !

[ಅವಳು ಗಮನಿಸುತ್ತಿಲ್ಲ. ಅವನು ಅವಳ ಹತ್ತಿರ ಸರಿದು ಅವಳ ತಲೆಯನ್ನು ಮುಟ್ಟಲು ಯತ್ನಿಸಿ, ಕೊಂಚ ಹೆದರಿ, ಮತ್ತೆ ತುಸುದೂರ ಸರಿದು, ಕೋಲನ್ನು ನೆಲಕ್ಕೆ ಬಡಿದು ಸದ್ದು ಮಾಡಿ,]

**ಶಾಂತಣ್ಣ :**

ಸ – ರೋ – ಜಾ – ದೇ – ವೀ !

[ಅವಳು ತಲೆಯನ್ನು ಮೇಲಕ್ಕೆತ್ತಿ ಕಂಬನಿದುಂಬಿದ ಕಣ್ಣುಗಳನ್ನು ಅವನತ್ತ ತಿರುಗಿಸುವಳು. ಅವನು ಎದೆತುಂಬಿಕೊಂಡವನಂತೆ ನಟಿಸುತ್ತಾ ದೊಡ್ಡತನದಿಂದ ಅವಳ ಬಳಿ ಸರಿದು ಎಡಗೈಯನ್ನು ಅವಳ ಭುಜದ ಮೇಲಿಟ್ಟು ಸಂತೈಸುತ್ತಾ, ಮುಖದ ಮೇಲೆ ಪರಮಾನಂದವನ್ನು ವ್ಯಕ್ತಗೊಳಿಸುತ್ತಾ]

**ಶಾಂತಣ್ಣ :**

ಸಮಾಧಾನವಿರಬೇಕು. ಸಮಾಧಾನವಿರಬೇಕು. ಈ ಲೋಕದಲ್ಲಿ ಹುಟ್ಟಿ ಬಂದ ಮೇಲೆ ನಾವು ಸಂಕಟಗಳಲ್ಲಿ ದುಃಖಿಸದೆ ಸಮಾಧಾನಿಯಾಗಿರಬೇಕೆಂದು ಅಕ್ಕಮಹಾದೇವಿಯರು ಹೇಳಿದ್ದಾರೆ. ಎಲ್ಲವನ್ನೂ ತಿಳಿದುಕೊಂಡ ನಿನ್ನಂಥಾ ಸುಶಿಕ್ಷಿತ ಯುವತಿಗೆ ನನ್ನಂಥವನು ಮತ್ತೂ ಮತ್ತೂ ಉಪದೇಶ ಮಾಡುವ ಅಗತ್ಯವಿಲ್ಲವಲ್ಲವೆ?

**ಸರೋಜ :**

[ಸುಧಾರಿಸಿಕೊಂಡು, ಎದ್ದು, ಮೇಜಿನ ಇನ್ನೊಂದು ಬದಿಯಲ್ಲಿ ನಿಂತು] ಏನೋ ಬಹಳ ದುಃಖವಾಯ್ತು ತಾಯಿ ನೆನಪು ಬಂದು. ಕೂಡ್ರಿ, ವಕೀಲರೆ.

**ಶಾಂತಣ್ಣ .**

ನಿಮ್ಮ ತಾಯಿ. ..ಮಹಾ ತಾಯಿ . ಪುಣ್ಯವಂತೆ. ಈ ಲೋಕದ ಜಂಜಡದಿಂದ ಬಿಡುಗಡೆಹೊಂದಿ ಪರಮಾತ್ಮನ ಪಾದಾರವಿಂದ ಸೇರಿಕೊಂಡ ನಿಮ್ಮ ತಾಯಿಯೇ ಭಾಗ್ಯವಂತೆ. ಈ ಸಂಸಾರದ ಕೊಳಚೆಯೊಳಗೇ ಕೊಳೆಯುತ್ತ ಬಿದ್ದಿರುವ ಹತಭಾಗ್ಯರು ನಾವು [ಸೋಗಿನ ನಿಟ್ಟುಸಿರಿಟ್ಟು] ಹೂಂ, ಬಂದದ್ದೆಲ್ಲಾ ಬರಲಿ. ಬಸವಣ್ಣನ ದಯೆಯೊಂದಿರಲಿ, ಈ ಲೋಕದಲ್ಲಿರುವವರಿಗೂ ಹೇಗಾದರೂ ಸಾಗಿಸಲೇಬೇಕಲ್ಲಾ ರಥವನ್ನು! [ಕುಳಿತುಕೊಂಡು, ಕೋಲನ್ನು ಅತ್ತ ಇತ್ತ ಮೆಲ್ಲಗೆ ತಿರುಗಿಸುತ್ತಾ] ಈ ಲೋಕದಲ್ಲಿ ಹುಟ್ಟಿ ಬಂದ

ಮೇಲೆ ತನಗೆ ಸಾಧ್ಯವಾದಮಟ್ಟಿಗೂ ಎರಡನೆಯವರಿಗೆ ಸಹಾಯ ಮಾಡಬೇಕಾದ್ದು ಮನುಷ್ಯ ಧರ್ಮ. ಹಾಗೇ ಆ ಎರಡನೆಯವರೂ ನಮಗೆ ಸಹಾಯ ಮಾಡಬೇಕಾದ್ದು ಅವರ ಧರ್ಮ.

**ಸರೋಜ :**

[ಏನೂ ಅರ್ಥವಾಗದೆ] ನನ್ನ ಕೆಲಸದ್ದು ಏನಾಯ್ತು ವಕೀಲರೆ ?

**ಶಾಂತಣ್ಣ :**

[ಎದ್ದು, ಕೋಲನ್ನು ತಿರಗಿಸುತ್ತ ಅತ್ತಿತ್ತ ಹೆಜ್ಜೆಯಿಡುತ್ತ] ಕೆಲಸ! ಕೆಲಸ! ಕೆಲಸ! ನೌಕರಿ! ನೌಕರಿ! ನೌಕರಿ! ಲೋಕದಲ್ಲೆಲ್ಲಾ ಇಂದು ಇದೊಂದೇ ಒಂದು ಕೂಗು. ನಮ್ಮಾ ದೇಶದಲ್ಲಿಯೇ ಎರಡು ಕೋಟಿಗಿಂತಲೂ ಹೆಚ್ಚು ಜನರು – ಗಂಡಸರು ಹೆಂಗಸರು ಎಲ್ಲರೂ ಕೆಲಸ ಕೆಲಸ ಎಂದು ಕೇಳುತ್ತಿದ್ದಾರೆ, ನೌಕರಿ ನೌಕರಿ ಎಂದು ಕೂಗುತ್ತಿದ್ದಾರೆ. ಇವರಿಗೆಲ್ಲಾ ಎಲ್ಲಿಂದ ನೌಕರಿ ಕೊಡಬೇಕು ಸರಕಾರ? ನೌಕರಿ ಅಂದರೇನು ಅಡವಿಯ ಗಿಡಕ್ಕೆ ಬಿಟ್ಟ ಹಣ್ಣೇ? ನೌಕರಿ! ನಿನಗೆ ಗೊತ್ತಿಲ್ಲವೇ ಸರೋಜಾ, ಇಂದು ನೌಕರಿ ಸಿಗುವದು ಬಹಳ ಕಷ್ಟ.

**ಸರೋಜ :**

[ದಿಙ್ಮೂಢಳಂತೆ] ಹೌದು, ಹೌದು, ಬಹಳ ಕಷ್ಟ.

**ಶಾಂತಣ್ಣ :**

ಅದರಲ್ಲೂ ಹೆಂಗಸರಿಗೆ ನೌಕರಿ ಸಿಗುವದು ಭಯಂಕರ ಕಷ್ಟ. ಗಂಡಸರ ಹಾಗೆ ನೀವು ಎಲ್ಲಾದರೂ ಡ್ರೈವರ್ ಕೆಲಸ ಮಾಡುವಂತಿಲ್ಲವಲ್ಲಾ! ನಿಮಗೆ ಬೇಕಾದ್ದು ಮಾಸ್ತರತಿಯ ಕೆಲಸವೊಂದೇ. ಒಂದು ಜಾಗ ಖಾಲಿ ಇದ್ದರೆ ಅದಕ್ಕೆ ಒಂದು ನೂರಾ ಎಂಟು ಅರ್ಜಿ ಬಂದಿರುತ್ತವೆ. ಮುಲ್ಕೀ ಪರೀಕ್ಷೆ ಪಾಸಾದವರು, ಟ್ರೇನಿಂಗ್ ಆದವರು, ಮ್ಯಾಟ್ರಿಕ್ ಆದವರು, ಇಂಟರ್, ಬಿ.ಎ. ಆದವರೂ ಅರ್ಜಿ ಹಾಕುತ್ತಾರೆ. ಈ ನೂರಾಯೆಂಟು ಜನ ಉಮೇದುವಾರರಲ್ಲಿ ಒಬ್ಬ ಸರೋಜಾದೇವಿಗೇ ಆ ಕೆಲಸ ಸಿಕ್ಕಬೇಕಾದರೆ ಬಹಳ ಕಷ್ಟ. ಬಹಳ ಕಷ್ಟ. ಹೌದೋ ಅಲ್ಲವೊ ?

**ಸರೋಜ :**

[ನಿರಾಶೆಯ ದನಿಯಲ್ಲಿ] ಹೌದು, ಹೌದು.

**ಶಾಂತಣ್ಣ :**

ಆದರೂ, ಈ ಲೋಕದಲ್ಲಿ ಹುಟ್ಟಿ ಬಂದ ಮೇಲೆ ಎಂಥ ಕಷ್ಟ ಬಂದರೂ ನಿರಾಶರಾಗದೆ ಮುನ್ನುಗ್ಗುವದೇ ಪುರುಷಾರ್ಥವಾಗಿದೆ. ನಿನಗೆ ಮೊದಲೇ ಹೇಳಿದ ಹಾಗೆ ನಾನೂ ಬಹಳವಾಗಿ ಯತ್ನಿಸಿದ್ದೇನೆ. ಸ್ಕೂಲಬೋರ್ಡ್ ಚೇರ್ಮನ್ನರಿಗೂ ಹೇಳಿದ್ದೇನೆ ಅಡ್ಮಿನಿಸ್ಟ್ರೇಟೀವ್ ಆಫೀಸರರಿಗೂ ಹೇಳಿದ್ದೇನೆ.

**ಸರೋಜ :**

[ಆತುರತೆಯಿಂದ] ಅವರೇನೆಂದರು ವಕೀಲರೆ?

**ಶಾಂತಣ್ಣ :**

ಅವರೇ? ನಿನಗೇ ಕೆಲಸ ಕೊಡುತ್ತೇವೆ ಎಂದೇನೋ ಹೇಳಿದ್ದಾರೆ ನನ್ನ ಮುಂದೆ. ಇದೇನು ಪಂಚಾಯಿತಿ ಬಂತಪ್ಪಾ ಎಂದು ಯೋಚಿಸುತ್ತಿದ್ದಾರೆ– ನನ್ನ ಹಿಂದೆ.

**ಸರೋಜ :**

ಪಂಚಾಯಿತಿ?

**ಶಾಂತಣ್ಣ :**

ಈ ಲೋಕದಲ್ಲಿ ಹುಟ್ಟಿ ಬಂದ ಮೇಲೆ ಇಂಥಾ ಪಂಚಾಯಿತಿ ಇರತಕ್ಕದ್ದೇ. ಇರತಕ್ಕದ್ದೇ. ಇರತಕ್ಕದ್ದೇ. ಪ್ರತಿಯೊಬ್ಬರಿಗೂ ಏನಾದರೊಂದು ಪಂಚಾಯಿತಿ ಇದ್ದೇಇರತಕ್ಕದ್ದೇ. ಇರತಕ್ಕದ್ದೇ. ಇರತಕ್ಕದ್ದೇ....ಅಂದರೆ.... [ಕೆಮ್ಮುವನು]

**ಸರೋಜ .**

ಮತ್ತೆ ಯಾರಿಗಾದರೂ ಮಾತು ಕೊಟ್ಟಿರುವರೋ ಏನು?

**ಶಾಂತಣ್ಣ :**

ಮಾತು? ಹೌದು. ಸರಿಯಾಗಿ ಊಹಿಸಿಕೊಂಡೆ. ನಾನು ನಿನಗೆ ಮಾತು ಕೊಟ್ಟಹಾಗೆ ಅವರು ನಿನ್ನಂಥ ಇನ್ನೊಬ್ಬರಿಗೆ ಮಾತು ಕೊಟ್ಟಿದ್ದಾರೆ.

**ಸರೋಜ.**

ಯಾರು? ಚೇರ್ಮನ್ನರೇ?

**ಶಾಂತಣ್ಣ.**

ಹೌದು. ಚೇರ್ಮನ್ನರೇ. ಪಾಪ, ಅವರಿಗೂ ಧರ್ಮಸಂಕಟ ಬಂದುಬಿಟ್ಟಿದೆ. ಉಗುಳುವ ಹಾಗೂ ಇಲ್ಲ, ನುಂಗುವ ಹಾಗೂ ಇಲ್ಲ. [ಅರ್ಥ ಪೂರ್ಣ ದೃಷ್ಟಿ ಯಿಂದ ಅವಳನ್ನು ದಿಟ್ಟಿಸುತ್ತಾ] ನನಗೆ ಪ್ರಿಯಳಾದ ನಿನಗಾಗಿ ನಾನು ಯತ್ನಿಸುತ್ತಿರುವ ಹಾಗೆ ತನಗೆ ಪ್ರಿಯಳಾದ ಸುಂದರಿಯೊಬ್ಬಳಿಗಾಗಿ ಚೇರ್ಮನ್ನರು ಯತ್ನಿಸುತ್ತಿದ್ದಾರಂತೆ. ಯತ್ನಿಸುವದೆಂದರೇನು, ವಚನ ಕೊಟ್ಟೊ ಆಗಿದೆಯಂತೆ. ಅಡ್ಮಿನಿಸ್ಟ್ರೇಟಿವ್ ಆಫೀಸರಿಂದ ಈ ವಿಷಯ ನನಗೆ ಗೊತ್ತಾಯ್ತು. ನಾನು ನಿನ್ನ ಬಗ್ಗೆ ವಶೀಲಿ ಹಚ್ಚಿದಾಗ ಏನೋ ದಾಕ್ಷಿಣ್ಯಕ್ಕೆಂದು ಆಗಲಿ ಅಂದರು. ಆ ಜಾಗ ಮಾತ್ರ ಚೇರ್ಮನ್ನರ ಪ್ರೇಯಸಿಗೇ ರಿಜರ್ವ್ ಆದ ಹಾಗಿದೆ. [ಮುಗುಳ್ನಗು ಸೂಸುತ್ತಾ] ಪ್ರೇಯಸಿಯ ಸಂತೋಷವೇ ಸಂತೋಷ ಅಲ್ಲವೇ ಸರೋಜಾ?

**ಸರೋಜ:**

ಚೇರ್ಮನ್ನರು ಬಹಳ ಸಂಭಾವಿತರೆಂದು ನನ್ನ ಕಲ್ಪನೆಯಿತ್ತು. ಅವರೂ ಇಂಥವರೇ ಏನು?

**ಶಾಂತಣ್ಣ:**

ಈ ಲೋಕದಲ್ಲಿ ಹುಟ್ಟಿ ಬಂದ ಮೇಲೆ ಇಂಥಾದ್ದೆಲ್ಲಾ ಇರತಕ್ಕದ್ದೇ. ಇರತಕ್ಕದ್ದೇ. ಹೇಳಿ ಕೇಳಿ ಮಾಯಾಪ್ರಪಂಚ. ವಿಶ್ವಾಮಿತ್ರನಂಥ ಮಹರ್ಷಿಗೂ ತಪ್ಪಲಿಲ್ಲ ಈ ಪೀಕಲಾಟ.

**ಸರೋಜ:**

ವಿಶ್ವಾಮಿತ್ರನದೊಂದು ಚಲೋ ನೆವ ಸಿಕ್ಕಿದೆ ಇವರಿಗೆ!

**ಶಾಂತಣ್ಣ:**

ನೆವ ಯಾಕಾದೀತು? ವಿಶ್ವಾಮಿತ್ರನೂ ನಮ್ಮಂತೆಯೆ ಮನುಷ್ಯನಾಗಿದ್ದ. ನಮ್ಮ ಈ ಚೇರ್ಮನ್ನರೂ ಮನುಷ್ಯರೇ ಅಲ್ಲವೇನು? ಮುಖ್ಯವಾದ ಮಾತೇ

ನೆಂದರೆ – ಒಬ್ಬ ಹೆಂಗಸಿನಿಂದ ಗಂಡಸಿಗೆ ತೃಪ್ತಿಯಾಗುವದಿಲ್ಲ. ಈ ಲೋಕದಲ್ಲಿ ಹುಟ್ಟಿ ಬಂದ ಗಂಡಸರೆಲ್ಲಾ ಹಾಗೇ. ನಾನೂ ಕೂಡಾ....

**ಸರೋಜ :**

ನೀವೂ ಕೂಡಾ....[ಲಜ್ಜಿತಳಾಗಿ ಮಾತು ನಿಲ್ಲಿಸುವಳು]

**ಶಾಂತಣ್ಣ :**

ಹೌದು. ನಿನ್ನೆದುರಿಗೆ ಮುಚ್ಚಿಟ್ಟುಕೊಳ್ಳುವದಾದರೂ ಯಾಕೆ? ನಾನೂ ಮಾನವಪ್ರಾಣಿಯೇ ಅಲ್ಲವೇ ಸರೋಜಾ? ಉಪ್ಪು ಖಾರ ತಿಂದು ಬೆಳೆದ ಈ ದೇಹ ಆಗಾಗ ದುರ್ಬಲವಾಗುವದು ನೈಸರ್ಗಿಕ. ನಾನೂ ಕೂಡಾ....

**ಸರೋಜ :**

ನಿಮ್ಮ ಬಗ್ಗೆ ಜನರು ಏನೇನೋ ಆಡಿಕೊಳ್ಳುತ್ತಾರೆ. ನಾನೇನೂ ನಂಬಲಿಲ್ಲ.

**ಶಾಂತಣ್ಣ :**

ಆಡಿಕೊಳ್ಳುತ್ತಾರೆ! ಜನರು ಆಡಿಕೊಳ್ಳುತ್ತಾರೆ! ಆಡಿಕೊಳ್ಳುವದು ಜನರ ಸ್ವಭಾವ. ನಾವು ಬೇಡವೆಂದರೆ ಅವರು ಬಿಡುವರೇ? ಒಂದಿದ್ದರೆ ಹತ್ತು ಮಾಡುವದೂ ಜನರ ಸ್ವಭಾವ. ತಿಳಿದವರು, ನಿನ್ನಂಥವರು ಅದನ್ನೆಲ್ಲ ನಂಬುವದಿಲ್ಲ. ತಿಳಿಯದವರು ಅನೇಕರು ನಂಬುತ್ತಾರೆ. ಸರಿ, ಅದಕ್ಕೆಲ್ಲ ನಾವು ಅಂಜಬೇಕಾಗಿಲ್ಲ. ಸಂತೆಯಲೊಂದು ಮನೆಯಮಾಡಿ ಶಬ್ದಕ್ಕಂಜಿದಡೆಂತಯ್ಯಾ ಅಂತ ಅಕ್ಕಮಹಾದೇವಿಯವರೇ ಅಪ್ಪಣೆ ಕೊಡಿಸಿಲ್ಲವೇ?

**ಸರೋಜ :**

ನಿಜ, ನಿಜ. ನಾನೂ ಅಷ್ಟೆ. ಜನರ ಸ್ತುತಿ ನಿಂದೆಗಳಿಗೆ ಎಂದೂ ಲಕ್ಷ್ಯ ಕೊಡುವದಿಲ್ಲ.

**ಶಾಂತಣ್ಣ :**

ಈ ಲೋಕದಲ್ಲಿ ಹುಟ್ಟಿ ಬಂದ ಮೇಲೆ ಯಾವದಕ್ಕು ಅಂಜದೆ ಅಳುಕದೆ ಇರಬೇಕು. ಅಂಜುಬುರುಕರು ಇಲ್ಲಿ ಬದುಕುವದೇ ಸಾಧ್ಯವಿಲ್ಲ.

**ಸರೋಜ :**

ಬದುಕುವದಕ್ಕೆ ಮೊದಲು ಒಂದು ಆಧಾರ ಬೇಕಲ್ಲರೀ? ಈ ಮಾಸ್ತರತಿಯ

ಕೆಲಸವಂತೂ ನನಗೆ ಸಿಗುವ ಆಸೆಯಿಲ್ಲ ಅಂಗಂತಾಯ್ತು. ನನಗಂತೂ ಈಗಿಂದೀಗ ಒಂದು ನೌಕರಿ ಬೇಕಾಗಿದೆ.

**ಶಾಂತಣ್ಣ :**

ಹೌದು. ಹೌದು. ನಿನಗೊಂದು ನೌಕರಿಯಂತೂ ಈಗಿಂದೀಗ ಬೇಕು. ನಿಜ. ನಿಜ. ಸರಿಯಾದ ಮಾತು. [ಚಿಂತಿತನಂತೆ ಅಭಿನಯಿಸುತ್ತ] ನೌಕರಿ ಬೇಕು, ನೌಕರಿ ಸಿಗುವಂತಿಲ್ಲ. ಇದೀಗ ಸಮಸ್ಯೆ.

**ಸರೋಜ :**

ಇಲ್ಲಿ ನೌಕರಿ ಸಿಗದಂತಿದ್ದರೆ ನಾನು ಹಳ್ಳಿಗೆ ಹೋಗಿ ಬಿಡಬೇಕಾಗುತ್ತದೆ. ನಮ್ಮಣ್ಣ ಕರೆಯುತ್ತಿದ್ದಾರೆ.

**ಶಾಂತಣ್ಣ :**

ನಿನ್ನಂಥ ಪಟ್ಟಣದ ಹುಡುಗಿ ಆ ಯಾವದೋ ಹಾಳು ಹಳ್ಳಿಯಲ್ಲಿ ಕೊಳೆಯುವದೆಂದರೇನು? ಛೆ! ಛೆ! ಎಂಥಾ ಮಾತು....ಎಂಥಾ ಮಾತು! ಕೋಮಲವಾದ ಪಾರಿಜಾತ ಕುಸುಮವನ್ನೊಯ್ದು ಬೆಂಕಿಯಲ್ಲಿ ಬಿಸುಟಿದ ಹಾಗಾದೀತು. ಆ ಹಳ್ಳಿಗಳಲ್ಲೇನು ರಸ್ತೆಗಳಿವೆಯೇ? ಬರೀ ಮುಳ್ಳು, ಕಲ್ಲು, ಮಣ್ಣು. ನಿನ್ನಂಥ ಚೆಲುವೆ ತಿರುಗಾಡುವುದಕ್ಕೂ ಯೋಗ್ಯವಲ್ಲ ಹಳ್ಳಿ.

**ಸರೋಜ :**

[ಲಜ್ಜೆ] ನಾನೂ ನಮ್ಮಣ್ಣನಿಗೆ ಹಾಗೇ ಹೇಳಿ ನಾನೇನು ಅಲ್ಲಿಗೆ ಬರುವದಿಲ್ಲೆಂದು ತಿಳಿಸಿ ಕಳಿಸಿಕೊಟ್ಟೆ. ಸದಾಶಿವ ಅಂತ ಇದ್ದಾರಲ್ಲ, ಅವರೂ ಕೇಳಿದರು. ಅವರಿಗೂ ಹಾಗೇ ಹೇಳಿದೆ.

**ಶಾಂತಣ್ಣ .**

[ಅವಳ ಬೆನ್ನು ತಟ್ಟಿ] ಶಾಬ್ಬಾಸ್! ಒಳ್ಳೆಯ ಕೆಲಸ ಮಾಡಿದೆ. ಮತ್ತೇನು ಕೇಳಿದ ಆ ಸದಾಶಿವ?

**ಸರೋಜ :**

[ಸಂಕೋಚದಿಂದ] ಮತ್ತೇನೂ ಇಲ್ಲ.

**ಶಾಂತಣ್ಣ :**

ಇಲ್ಲ. ಮತ್ತೇನೋ ಕೇಳಿರಲೇಬೇಕು. ಅವನು ಗೊತ್ತಿಲ್ಲವೇ ನನಗೆ? ಹುಡುಗ ಬಹಾಳ ಉಪದ್ವ್ಯಾಪಿ. ಸಮಾಜಸೇವಾ ಸಂಘದಲ್ಲಿ ನನಗೆ ಬಹಳ ಕಿರುಕುಳ ಕೊಡುತ್ತಾ ಇದ್ದ. ಇರಲಿ. ಅಂಥವನಿಂದ ನನಗೇನಾದೀತು? ಇರಲಿ, ನಿಮ್ಮ ತಾಯಿಯೇನೋ ನಿನ್ನನ್ನು ಅವನಿಗೇ ಕೊಡಬೇಕು ಅಂತ ವಿಚಾರಮಾಡಿದ್ದರಂತಲ್ಲ?

**ಸರೋಜ :**

[ಲಜ್ಜೆಯಿಂದ] ಹೌದು.

**ಶಾಂತಣ್ಣ :**

[ಮೀಸೆಯನ್ನು ಕುಣಿಸುತ್ತಾ] ಹಾಗಾದರೆ ಅದೇ ವಿಚಾರ ಕೇಳಿರಬೇಕು ನಿನ್ನ ಹತ್ತಿರ ಆ ಸದಾಶಿವ?

**ಸರೋಜ :**

[ಮೆಲ್ಲಗೆ] ಹೌದು.

**ಶಾಂತಣ್ಣ :**

ನಾನು ಊಹಿಸಿದ ಹಾಗೇ ಆಗಿದೆಯಲ್ಲ. ಸರಿ, ಸರಿ, ಸರಿ. ನೀನೇನು ಹೇಳಿದೆ ಅವನಿಗೆ?

**ಸರೋಜ :**

ಈಗಲೇ ಮದುವೆಯಾಗುವ ಮನಸ್ಸಿಲ್ಲಾ ಅಂತ....

**ಶಾಂತಣ್ಣ :**

[ಸಂತೋಷದಿಂದ] ಶಾಬ್ಬಾಸ್! ಹೊಸಕಾಲದ ಹುಡುಗಿಯರಿಗೆ ತಕ್ಕ ಹಾಗೇ ಮಾತಾಡಿದೆ. ನಿನ್ನಂಥ ಸ್ವತಂತ್ರ ಮನೋಭಾವದ ಯುವತಿಯರ ಸಂಖ್ಯೆ ಬೆಳೆದಷ್ಟೂ ನಮ್ಮ ದೇಶ ಪ್ರಗತಿಹೊಂದುವುದು.

**ಸರೋಜ :**

ಆದರೆ, ಸ್ವತಂತ್ರವಾಗಿರುವದಕ್ಕೆ ಮೊದಲು ಒಂದು ಕೆಲಸ ಬೇಕಲ್ಲರೀ, ಶಾಂತಣ್ಣನವರೇ?

**ಶಾಂತಣ್ಣ :**

ಹೌದು, ಹೌದು. ಅದೂ ನಿಜ. ಒಂದೆರಡು ತಿಂಗಳು ತಾಳು. ಅಷ್ಟರಲ್ಲಿ ನಾನು ಬೇರೇನಾದರೂ ಕೆಲಸ ಕೊಡಿಸುತ್ತೇನೆ.

|ಸರೋಜ ಮಾತನಾಡದೆ ಮೌನವಾಗಿರುವಳು|

**ಶಾಂತಣ್ಣ :**

(ಸಮೀಪ ಬಂದು) ಯಾಕೆ? ಎರಡು ತಿಂಗಳು ತಡೆಯುವದು ಹೇಗೆ ಅಂತ ಚಿಂತೆಯೋ? ಈ ಶಾಂತಣ್ಣ ಇರುವವರೆಗೆ ನೀನು ಯಾವದಕ್ಕೂ ಚಿಂತಿಸ ಬೇಕಾಗಿಲ್ಲ, ಸರೋಜಾ. ನಿನ್ನ ಚಿಂತೆ ಅಂದರೆ ನನ್ನ ಚಿಂತೆ. ನನ್ನ ಚಿಂತೆ ಅಂದರೆ ನಿನ್ನ ಚಿಂತೆ. ನಮ್ಮಿಬ್ಬರ ಚಿಂತೆ ಆ ಪರಮಾತ್ಮನಿಗೆ! (ಕೈಹಿಡಿಯ ಲೆತ್ತಿಸುವನು. ಅವಳು ದಿಗಿಲುಗೊಂಡು ದೂರ ಸರಿಯುವಳು.)

**ಶಾಂತಣ್ಣ .**

ಇಷ್ಟು ಸಂಕೋಚಪಟ್ಟುಕೊಂಡರೆ ಹೇಗೆ ಸರೋಜಾ? ಸ್ವತಂತ್ರವಾಗಿ ಜೀವಿಸ ಬಯಸುವ ಯುವತಿಯರಿಗೆ ಸಂಕೋಚವೊಂದು ಮಹಾವೈರಿ. ನಾನೇನು ಪರಕೀಯನಲ್ಲವಲ್ಲ ನಿನಗೆ? ಯಾವಾಗಲೂ ನಿನ್ನ ಸುಖಕ್ಕಾಗಿಯೇ ಚಿಂತಿಸುವ ನಿನ್ನ ಹಿತೈಷಿ ನಾನು. ಕೆಲಸ ಸಿಕ್ಕುವವರೆಗೆ ಹಣಕ್ಕಾಗಿ ನೀನೇನೂ ಯೋಚಿಸಬೇಕಾಗಿಲ್ಲ. ಈ ಶಾಂತಣ್ಣನ ಹತ್ತಿರ ಹಣಕ್ಕೇನು ಕೊರತೆ? ಇಗೋ, ಸದ್ಯ ಈ ಎರಡು ನೂರು ರೂಪಾಯಿ ಇಟ್ಟುಕೋ (ಕಿಸೆಯಿಂದ ನೋಟು ತೆಗೆಯುವನು)

**ಸರೋಜ :**

ನನಗೆ ನಿಮ್ಮ ಹಣ ಬೇಡ ವಕೀಲರೆ. ಒಂದು ನೌಕರಿ ಕೊಡಿಸಿದರೆ ಸಾಕು, ಬಹಳ ಉಪಕಾರವಾಗುತ್ತದೆ.

**ಶಾಂತಣ್ಣ :**

ಅದನ್ನೂ ಕೊಡಿಸುತ್ತೇನೆ. ಆ ಬಗ್ಗೆ ನೀನೇನೂ ಚಿಂತೆ ಮಾಡಬೇಡ. ಸ್ವಲ್ಪ ದಿನ ತಡೆ. ಅದುವರೆಗೆ ಖರ್ಚಿಗೆ ಈ ರೂಪಾಯಿ ಇರಲಿ.

**ಸರೋಜ :**
ಏನೂ ಬೇಡ ವಕೀಲರೆ.

**ಶಾಂತಣ್ಣ :**
ನೀನು ಹೀಗೆಲ್ಲ ಮಾತನಾಡಿದರೆ ನನಗೆ ಬಹಳ ದುಃಖವಾಗುತ್ತದೆ ಸರೋಜಾ, ನೋಡು. ನಿನ್ನ ತಾಯಿಗೂ ನನಗೂ ಬಹಳ ವಿಶ್ವಾಸವಿತ್ತು. ಅವರು ತೀರಿ ಕೊಳ್ಳುವದಕ್ಕೆ ಮೊದಲು ನನ್ನನ್ನು ಹತ್ತಿರ ಕೂಡಿಸಿಕೊಂಡು ನಿನ್ನನ್ನು ಕಾಪಾಡಬೇಕೆಂದು ಕಣ್ಣಲ್ಲಿ ನೀರು ತುಂಬಿಕೊಂಡು ಕೇಳಿಕೊಂಡರು. ನಿನ್ನ ಕೂದಲು ಕೊಂಕದಂತೆ ಕಾಪಾಡುವದಾಗಿ ವಚನ ಕೊಟ್ಟಿದ್ದೇನೆ ನಾನು. ಆ ಪ್ರಕಾರ ಈಗ ನಿನ್ನ ಯೋಗಕ್ಷೇಮ ನೋಡಿಕೊಳ್ಳಬೇಕಾದದ್ದು ನನ್ನ ಧರ್ಮ. ಈ ಹಣವನ್ನು ತೆಗೆದುಕೋ. ಇದಿಷ್ಟೇ ಅಲ್ಲ, ನೀನು ಬೇಡಿದಾಗ ಬೇಡಿದಷ್ಟು ಕೊಡುತ್ತೇನೆ. (ಸ್ವಲ್ಪ ತಡೆದು) ಸೀರೆ, ರವಕೆ, ಒಡವೆ ವಸ್ತ್ರ ಏನು ಬೇಕೋ ಎಲ್ಲಾ ಕೊಡುತ್ತೇನೆ. ಮೋಟಾರು ಕಾರು ಬೇಕೆಂದರೆ ಅದನ್ನೂ ಕೊಡುತ್ತೇನೆ. ನಿನ್ನ ಹೆಸರಿಗೇ ಒಂದು ಮನೆಯನ್ನೂ ಬರೆದುಕೊಡುತ್ತೇನೆ.

**ಸರೋಜ :**
(ಅರ್ಧ ಮಾಡಿಕೊಂಡು) ನನಗೇನೂ ಬೇಡ ವಕೀಲರೆ. ನಾನು ಅನಾಥೆ. ನನಗೊಂದು ಕೆಲಸ ಕೊಡಿಸಿದರೆ ಸಾಕು. ಇನ್ನೇನೂ ಬೇಡ.

**ಶಾಂತಣ್ಣ :**
(ಹತ್ತಿರ ಬರುತ್ತಾ) ಎಂಥಾ ಹುಚ್ಚಿಯೋ ನೀನು ಸರೋಜಾ? ತಾನಾಗಿ ಬರುವ ಭಾಗ್ಯಲಕ್ಷ್ಮಿಯನ್ನು ಯಾರಾದರೂ ಬೇಡ ಅನ್ನುತ್ತಾರೆಯೇ?

**ಸರೋಜ :**
ಪುಕ್ಕಟೆಯಾಗಿ ನನಗೆ ಏನೂ ಬೇಡ. ನಾನು ದುಡಿದು ತಿನ್ನಲು ಬಯಸುತ್ತೇನೆ.

**ಶಾಂತಣ್ಣ :**
ಈ ಲೋಕದಲ್ಲಿ ಕೆಲವರಿರುತ್ತಾರೆ. ಅವರು ದುಡಿದು ತಿನ್ನಲು ಹುಟ್ಟಿರುತ್ತಾರೆ. ಇನ್ನು ಕೆಲವರಿರುತ್ತಾರೆ. ಅವರು ದುಡಿಯುವ ಅವಶ್ಯಕತೆಯೇ ಇಲ್ಲ.

ನೀನು ಸರೋಜಾ, ಈ ಎರಡನೆಯ ವರ್ಗಕ್ಕೆ ಸೇರಿದವಳು. ನಿನ್ನಂಥ ಚೆಲುವೆ ದುಡಿಯುವದೆಂದರೆ ಹಾಸ್ಯಾಸ್ಪದವಾದ ಮಾತು. ರಾಣಿಯ ಹಾಗೆ ಸುಖವಾಗಿ ಬದುಕಲು ಹುಟ್ಟಿ ಬಂದವಳು ನೀನು. (ಕೈಹಿಡಿಯಲು ಮುಂದಾಗುವನು)

**ಸರೋಜ.**

(ದೂರ ಸರಿದು) ನೀವು ಹೀಗೆಲ್ಲಾ ಆಡಬಾರದು ವಕೀಲರೆ.

**ಶಾಂತಣ್ಣ.**

(ನಿರ್ಲಜ್ಜತನದಿಂದ ನಗುತ್ತಾ) ನಾನು ಹೀಗೆಲ್ಲಾ ಆಡಬಾರದು? ಏನೋ! ನನಗದೆಲ್ಲಾ ಗೊತ್ತಿಲ್ಲ. ಎರಡು ತಿಂಗಳಿಂದಲೂ ಮನಸ್ಸಿನಲ್ಲಿ ಕುದಿಯುತ್ತಿರುವ ವಿಚಾರಗಳನ್ನೆಲ್ಲಾ ಇಂದು ತಡೆಯಲಾರದೆ ಆಡಿಬಿಡುತ್ತಿದ್ದೇನೆ. ನನ್ನನ್ನು ನಿರಾಶನನ್ನಾಗಿ ಮಾಡಬೇಡ ಸರೋಜಾ, ನಿನ್ನ ಪ್ರೇಮಭಿಕ್ಷೆಗಾಗಿ ನಾನು ಕಾಯುತ್ತಿದ್ದೇನೆ.

**ಸರೋಜ.**

(ಕೋಪವನ್ನು ತಡೆಯುತ) ಪ್ರೇಮಭಿಕ್ಷೆ! ಈಗ ಗೊತ್ತಾಯಿತು ನಿಮ್ಮ ನಿಜ ಸ್ವರೂಪ. ಸದಾಶಿವ ಹೇಳಿದಾಗ ನಾನು ನಂಬಿರಲಿಲ್ಲ. ನೀವು ಬಹಳ ಒಳ್ಳೆಯವರೆಂದೇ ಭಾವಿಸಿದ್ದೆ.

**ಶಾಂತಣ್ಣ.**

ನಿಜವಾಗಿಯೂ ನಾನು ಒಳ್ಳೆಯವನೇ ಸರೋಜಾ. ನಿನ್ನನ್ನು ಸುಖದಿಂದಿಡುವದಕ್ಕಾಗಿಯೇ ನಾನು ಇಷ್ಟೆಲ್ಲ ಕಷ್ಟಪಡುತ್ತಿರುವದು!

**ಸರೋಜ.**

ನನ್ನನ್ನು ಸುಖದಿಂದಿಡುವದು! ಹ್ಯಾಗೆ ಇಡಬೇಕೆಂದು ನಿಮ್ಮ ವಿಚಾರ? (ವ್ಯಂಗ್ಯವಾಗಿ) ನನ್ನನ್ನು ಮದುವೆ ಮಾಡಿಕೊಳ್ಳುವ ಅಪೇಕ್ಷೆಯೋ ಏನು ನಿಮ್ಮದು!

**ಶಾಂತಣ್ಣ.**

(ಗಹಗಹಿಸಿ ನಗುತ್ತಾ) ಮದುವೆ! ಮದುವೆ ಯಾತಕ್ಕೆ ಬೇಕು? ಪ್ರೇಮ

ವೊಂದು ಇದ್ದರೆ ಮದುವೆಯೇನು ಮಹತ್ವದ್ದಲ್ಲ. ಅದೂ ಅಲ್ಲದೆ ಈ ಎರಡ ನೆಯ ಮದುವೆ ಮಾಡಿಕೊಳ್ಳಲೂ ಬರುವಂತಿಲ್ಲ. ಕಾಯದೆ ಜೇರಿ ಇದೆಯಲ್ಲಾ. ಮದುವೆಯಾಗದಿದ್ದರೂ ಮದುವೆಯಾದವರ ಹಾಗೇ ಇರುವದು....

**ಸರೋಜ :**

ಹೀಗೆ ಇನ್ನೂ ಎಷ್ಟು ಮಂದಿ ಹೆಂಗಸರೊಡನೆ ಮದುವೆಯಾದವರ ಹಾಗೇ ಇದ್ದೀರಿ ?

**ಶಾಂತಣ್ಣ .**

ನಿನ್ನನ್ನು ಬಿಟ್ಟು ಇನ್ನೊಬ್ಬ ಹೆಂಗಸನ್ನು ನಾನು ಕನಸುಮನಸಿನಲ್ಲೂ ಬಯಸಿಲ್ಲ ಸರೋಜಾ.

**ಸರೋಜ :**

ಈಗ ಬಯಸುತ್ತಿರಲಿಕ್ಕಿಲ್ಲ. ಯಾಕಂದರೆ ನನ್ನನ್ನು ನಿಮ್ಮ ಬಲೆಗೆ ಬೀಳಿಸಿ ಕೊಳ್ಳುವ ಯತ್ನ ನಡೆದಿದೆಯಲ್ಲ. ಒಂದು ಕಾಲಕ್ಕೆ ಚಂಪಾವತಿಯನ್ನೂ ಹೀಗೇ ಬಲೆಯಲ್ಲಿ ಕೆಡವಿಕೊಂಡಿರಬೇಕು.

**ಶಾಂತಣ್ಣ :**

(ಬೆಚ್ಚಿ) ಚಂಪಾವತಿ !

**ಸರೋಜ .**

(ಅಣಕದಿಂದ) ಓಹ್ಹೊ. ಅವಳ ಹೆಸರೂ ಸಹ ತಿಳಿಯುದಲ್ಲವೆ ನಿಮಗೆ ?

**ಶಾಂತಣ್ಣ :**

ಸರೋಜಾ ಎಂಬ ಹೆಸರನ್ನು ಬಿಟ್ಟರೆ ಬೇರಾವ ಹೆಸರೂ ನನಗೆ ತಿಳಿಯದು. (ಮಂಡಿಯೂರಿ ಕುಳಿತು, ದೀನವಾಣಿಯಲ್ಲಿ) ಎಂಥಾ ಮಹಾರಾಜರೆದುರಿಗೂ ತಲೆ ತಗ್ಗಿಸದ ಈ ಶಾಂತಣ್ಣ ನಿನ್ನೆದುರಿಗೆ ತಲೆ ತಗ್ಗಿಸಿ ಪ್ರಣಯಭಿಕ್ಷೆ ಕೇಳುತ್ತಿದ್ದಾನೆ. ಸರೋಜಾ, ನನ್ನ ಸರೋಜಾ, ನನ್ನ ಮೇಲೆ ಕೃಪೆಮಾಡು !

(ಮುಖ ನೇಲಕ್ಕೆತ್ತಿ ಅವಳ ಕೈಹಿಡಿಯಲು ಯತ್ನಿಸುವನು. ಅವಳು ಛಳೀರೆಂದು ಅವನ ಕೆನ್ನೆಗೊಂದು ಏಟು ಕೊಟ್ಟು)

**ಸರೋಜ :**

ನಿನಗೆ ನೀಡುವ ಭಿಕ್ಷೆಯೆಂದರೆ ಇಷ್ಟೆ. ನಡೆ, ಹೊರಡು ಮೊದಲು ಇಲ್ಲಿಂದ, ನಾಯಿ ! (ಎನ್ನುತ್ತಿರುವಂತೆ ರಭಸದಿಂದ ತೆರೆಯುರುಳುವುದು)

# ಎರಡನೆಯ ಅಂಕ.

## ದೃಶ್ಯ ಒಂದು

[ಸದಾಶಿವನ ಮನೆಯ ನಡಸಾಲೆ. ಅವನ ತಂದೆ ಮಹಾಲಿಂಗಪ್ಪ ಹಗ್ಗ ಹೊಸೆಯುತ್ತ ಕೂ ತಿದ್ದಾನೆ. ಮುದುಕನ ಕಣ್ಣು ಮಂದ. ಬಿಳಿಯ ತಲೆಗೂದಲು. ಬಿಳಿಯ ಗಡ್ಡ ಮೀಸೆ. ಹಳ್ಳಿಗರ ವೇಷ. ಹಗ್ಗ ಹೊಸೆಯುತ್ತಿದ್ದ ಹಾಗೆ ತನ್ನಷ್ಟಕ್ಕೆ ತಾನೆ ಮಾತಾಡಿಕೊಳ್ಳು ತ್ತಿದ್ದಾನೆ.]

**ಮಹಾಲಿಂಗಪ್ಪ :**

ಈ ಹುಡುಗನಿಗೆ ಯಾವಾಗ ಬುದ್ಧಿ ಬರುತ್ತೈತ್ಯೋ ಮಾದೇವನೇ ಬಲ್ಲ. ಸಾಲೀ ಕಲಿತು ಬಂದು ಒಕ್ಕಲುತನಾ ಮಾಡಾಕ ನಿಂತ. ನಾನೇನು ಬ್ಯಾಡನ್ನಲಿಲ್ಲ. ನಮ್ಮ ಹೊಲದಾಗ ನಾವು ದುಡಿದರ ಏನು ತಪ್ಪಲ್ಲ. ಆದರೂ ಈ ನಮ್ಮ ಹುಚ್ಚು ಸದಾಶಿವ ಹೊಲದಾಗೂ ದುಡೀತಾನ, ಮನಿಯಾಗೂ ದುಡೀತಾನ. ಗಂಡಸರ ಕೆಲಸಾ ಗಂಡಸರು ಮಾಡಿದರ ಚಂದ. ಹೆಂಗಸರ ಕೆಲಸಾನೂ ಗಂಡಸರೂ ಮಾಡಿದರ ಹೆಂಗ? ನನಗೂ ಕಣ್ಣು ಮಂಜಾತು. ಕೈಯಾಗಿನ ಶಕ್ತಿ ಹೋತು. ನಾನು ನೋಡಲಿನ್ನಾಂಗ ಅಡಿಗೀ ಮಾಡೂ ಹಂಗಿಲ್ಲ. ಮದುವೀ ಮಾಡಿಕೊಂಡು ಹೆಂಡತೀನ ಕರಕೊಂಡು ಬಾ ಅಂತ ಇವಗ ಹೇಳಿ ಹೇಳಿ ನನ್ನ ಗಂಟಲು ಹರಿದುಹೋತು. ಇವಗ ಮಾತ್ರ ಮದುವೀನೂ ಬ್ಯಾಡಾಗೈತಿ. ಇವ ಮನ್ಯಾಗ ಕುಂತು ರೊಟ್ಟೀ ಬಡಿಯೂದು ನೋಡಿ ಊರಮಂದಿ ನಗಾಕ ಹತ್ತಿದಾರ. (ಹಗ್ಗವನ್ನು ಬಿಟ್ಟು ಕೈಗಳೆರಡನ್ನೂ ಗಲ್ಲಕ್ಕೆ ಆನಿಸಿ ಕುಳಿತುಕೊಂಡು) ಇವಗಿನ್ನೂ ಯಾವಾಗ ಬುದ್ಧಿ ಬಂದೀತು ಅಂತೀನಿ.

[ಬೀದಿಯ ಕಡೆಯಿಂದ ಶಂಕರಪ್ಪ ಮಾಸ್ತರು ಬರುವನು. ಅವನು ಕೋಟು ತೊಟ್ಟು, ಧೋತರ ಉಟ್ಟು ಗಾಂಧೀಟೋಪ್ಪಿಗೆ ಇಟ್ಟುಕೊಂಡಿದ್ದಾನೆ. ಹಸನ್ಮುಖಿ.]

**ಶಂಕರಪ್ಪ :**

ಏನು ನಡಸಿದ್ದೀಯಪಾ ದೊಡ್ಡಪ್ಪಾ?

**ಮಹಾಲಿಂಗಪ್ಪ :**

(ತಿರಿಯೆತ್ತಿ ನೋಡಿ) ಬಾರಪಾ ಮಾಸ್ತರಪ್ಪಾ. ಇಲ್ಲಿ ಬಾ, ಇಲ್ಲಿ ಕುಂದ್ರು ಕಂಬಳಿಯ ಮ್ಯಾಲ.

**ಶಂಕರಪ್ಪ :**

(ಕುಳಿತುಕೊಂಡು, ಒಳಬಾಗಿಲ ಕಡೆ ದೃಷ್ಟಿ ಹೊರಳಿಸಿ) ಸದಾಶಿವ ಇದಾನೆ ಔದಲ್ಲೋ ಮನೆಯಲ್ಲಿ ?

**ಮಹಾಲಿಂಗಪ್ಪ.**

ಸಪ್ಪಳ ಕೇಳಿಸುವದಿಲ್ಲೇನು ಅವ ರೊಟ್ಟಿ ಬಡೀತಾ ಇರೂದು ?

**ಶಂಕರಪ್ಪ :**

(ನಕ್ಕು) ಅದೇನು ಬಿಡಪ್ಪಾ, ದಿನಾಲೂ ಇದ್ದದ್ದೇ.

**ಮಹಾಲಿಂಗಪ್ಪ :**

(ಹುಬ್ಬುಗಳನ್ನೇರಿಸಿ) ಹೂಂ. ನೀನೂ ಅವನ ಹಾಂಗs ಮಾತಾಡುತೀ ಯಲ್ಲಾ ? ಅವನಿಗ್ಯಾಕ ಬೇಕು ಈ ಗೋಳಾಟ ಎಲ್ಲಾ ? ಇದೇನು ಗಂಡಸರ ಕೆಲಸs ! ಛಿ ! ಛಿ ! ಇವ ಮದುವಿ ಮಾಡಿಕೊಂತೀನಿ ಅಂದರ ಇವನಿಗೇನ ಕಡಿಮಿಯುಸಾ ಹೆಣ್ಣು ಕೊಡುವವರು ? ಇವಗs ಏನೋ ಮಲರೋಗ ಬಂದಾಂಗ ಆಗ್ಯೆತಿ.

**ಶಂಕರಪ್ಪ :**

ಮಲರೋಗ ಯಾಕೆ ಬಂದೀತು ದೊಡ್ಡಪ್ಪಾ ? ಇವಗ ಬಂದಿರುವ ರೋಗ ಬ್ಯಾರೆ.

**ಮಹಾಲಿಂಗಪ್ಪ :**

ಬ್ಯಾರೆ ರೋಗ ಅಂತೀಯಾ ? ಮತ್ತೇನು ಬಂದೈತಪಾ ಮಾರಾಯಾ ?

**ಶಂಕರಪ್ಪ :**

ಇವಗ ಬಂದದ್ದು ಪ್ರೇಮರೋಗ....

**ಮಹಾಲಿಂಗಪ್ಪ :**

ಪರೇಮರೋಗ ? ಅಂದರs ?

**ಶಂಕರಪ್ಪ.**

ಎಲ್ಲರಿಗೂ ಒಂದಿಲ್ಲೊಂದು ಸಲ ಆದರೂ ಬರುವ ರೋಗ ಅದು ದೊಡ್ಡಪ್ಪಾ. ನಿನಗೂ ಬಂದು ಹೋದದ್ದು, ನನಗೂ ಬಂದು ಹೋದದ್ದು ಈಗ ಸದಾಶಿವಗ ಬಂದೈತಿ.

[" ಏನದು? ಏನು ಬಂದದ್ದು?" ಎನ್ನುತ್ತಾ ಸದಾಶಿವ ಒಳಗಿನಿಂದ ಬರುವನು. ಕೈಗೆ ಹಿಟ್ಟು ಹತ್ತಿದೆ. ಮುಖಕ್ಕೆ ಅಲ್ಲಲ್ಲಿ ಮಸಿ ಹತ್ತಿದೆ. ಅವನೀಗ ಬುಶ್‌ಕೋಟು ಪ್ಯಾಂಟುಗಳಲ್ಲಿಲ್ಲ. ಹಾಫ್‌ಶರ್ಟು, ಧೋತರ. ಧೋತರ ಎತ್ತಿ ಕಟ್ಟಿದ್ದಾನೆ. ಕೂದಲು ಕೆದರಿದೆ]

**ಸದಾಶಿವ:**

ಏನದು ಶಂಕರಪ್ಪ?

**ಶಂಕರಪ್ಪ**

ನಿನಗೆ ಮಲರೋಗ ಬಂದೈತಿ ಅಂತ ದೊಡ್ಡಪ್ಪ ಹೇಳುತ್ತಾನೆ. ಅಲ್ಲ, ಪ್ರೇಮರೋಗ ಬಂದೈತಿ ಅಂತಾ ನಾ ಹೇಳುತ್ತಿದ್ದೆ.

**ಸದಾಶಿವ.**

(ನಗುತ್ತಾ, ಹಿಟ್ಟು ಹತ್ತಿದ ಕೈಯಿಂದಲೇ ಕೂದಲು ತಿದ್ದಿಕೊಳ್ಳುವನು. ಹಿಟ್ಟು ತಲೆಗೂದಲಿಗೂ ಹತ್ತಿಕೊಳ್ಳುವುದು) ಸರಿ, ಬಿಡು. ನಿನಗೆ ಬೇರೆ ಉದ್ಯೋಗವಿಲ್ಲ. ಸಾಲೆ ಮುಗಿಯಿತೇನು?

**ಶಂಕರಪ್ಪ.**

ಮುಗಿಯಿತಲ್ಲಾ ಇದೇ ಈಗ. ಇನ್ನೂ ನಿನ್ನ ಸ್ವಯಂಪಾಕ ಮುಗೀಲಿಲ್ಲೇನು?

**ಸದಾಶಿವ:**

ಇನ್ನೇನು ಮುಗಿದೇಹೋಯ್ತು. ಊಟಮಾಡಿ ಸಾಸಿವೇಹಳ್ಳಿಗೆ ಹೋಗಬೇಕು. ಅಲ್ಲೊಂದು ಜೋಡಿ ಹೋರಿ ಇವೆಯಂತೆ. ಮಲ್ಲಣ್ಣಾ ಹೇಳಿ ಕಳಿಸಿದ್ದಾನೆ. ನೋಡಿಕೊಂಡು ಬರಬೇಕು.

**ಶಂಕರಪ್ಪ:**

ಹೋರಿಗಳನ್ನ ನೋಡಿಕೊಂಡು ಬರುವ ನೆಪದಾಗ ಪೋರಿಯನ್ನೂ ನೋಡಿ

ಕೊಂಡು ಬರಬಹುದಲ್ಲ! ನನ್ನ ಮುಂದೆ ಇಲ್ಲದ್ದು ಹೇಳಬೇಡ. ನೀನು ಹೋಗುವದು ಆ ಹುಡುಗೀನ್ನ ನೋಡುವದಕ್ಕೇ!

**ಮಹಾಲಿಂಗಪ್ಪ:**

ಯಾರನ್ನ? ಆ ಸರ್ಜಾನ್ನೇ?

**ಶಂಕರಪ್ಪ:**

(ಗಟ್ಟಿಯಾಗಿ ನಕ್ಕು) ಸರ್ಜಾ ಅಲ್ಲ, ದೊಡ್ಡಪ್ಪಾ. ಅವಳ ಹೆಸರು ಸ – ರೋ – ಜಾ!

**ಮಹಾಲಿಂಗಪ್ಪ:**

ಏನ್ ಹೆಸರೋ ಬಿಡಪ್ಪಾ. ಈ ಪಟ್ಟಣದ ಮಂದೀದು ಎಲ್ಲಾ ಯಿಚಿತ್ರಾ. ನಮ್ಮಂಥಾ ಹಳ್ಳೀ ಮಂದಿ ಅನ್ನಲಿಕ್ಕೂ ಬರದಂಥ ಹೆಸರಿಡುತಾರೆ. ಹೌದೇನೋ ಸದಾ, ಆ ಹುಡುಗೀ ನೋಡೂದಕ್ಕ ಹೋಗ್ತೀಯಾ?

**ಸದಾಶಿವ:**

ಈ ಮಾಸ್ತರನಿಗೆ ಚೇಷ್ಟೆ ಮಾಡುವದೊಂದೇ ಕೆಲಸ, ಬಿಡಪ್ಪಾ. ಹೋರಿ ಚೆನ್ನಾಗಿವೆಯಂತೆ. ನೋಡಿಕೊಂಡು ಬರುತ್ತೇನೆ.

**ಮಹಾಲಿಂಗಪ್ಪ:**

ಆ ಹುಡುಗಿಗೆ ಇಪ್ಪತ್ತು ತುಂಬೂದಕ್ಕ ಬಂದೈತಂತಲ್ಲ! ಇನ್ನೂ ಮದುವಿ ಯಾಕ ಆಗಲಿಲ್ಲಪಾ ಸದಾ?

**ಸದಾಶಿವ:**

ಈಗೇನು ಬಿಡಪ್ಪಾ. ಮೂವತ್ತು ವರ್ಷದವರೆಗೂ ಮದುವೆಯಾಗದೆ ಹಾಗೇ ಇರುತ್ತಾರೆ ಪಟ್ಟಣದ ಹುಡುಗಿಯರು.

**ಶಂಕರಪ್ಪ:**

ಹುಡುಗಿಯರ ಗಾಳಿ ಬಡಿದೈತಿ ಈ ಹುಡುಗನಿಗೂ!

**ಮಹಾಲಿಂಗಪ್ಪ:**

ಪಟ್ಟಣದಾಗ ನಾಲೀ ಕಲಿತಾವ ಅಂದಮ್ಯಾಲ ಗಾಳಿ ಬಡೀದ ಹ್ಯಾಂಗ ಬಿಟ್ಟೀತು? ಏನು ಯಾವಾಕೆರೆ ಮಳ್ಳುಮಾಡಿದಾಳೋ ಏನೊ.

**ಶಂಕರಪ್ಪ** :

ಅದರಲ್ಲಿ ಸಂಶಯ ಯಾಕ ಸೊಡ್ತಪ್ಪಾ ? ಪಟ್ಟಣದ ಹುಡುಗಿಯೊಂದು ಇವನ್ನ ಮಳ್ಳ ಮಾಡಿದ್ದೂ ಖರೆ, ಇವ ಅವಳಿಗೆ ಮಳ್ಳಾದದ್ದೂ ಖರೆ.

**ಮಹಾಲಿಂಗಪ್ಪ** :

ಹಿಂಗೇನ? ಇಷ್ಟ ದಿನಾ ನನಗ ಪತ್ತೇನೂ ಹತ್ತಗೊಟ್ಟಿಲ್ಲಲ್ಲ. ಇವಾ! ಯಾರೋ ಶಂಕರಪ್ಪಾ, ಆ ಮಾಯಗಾರ್ತಿ?

**ಶಂಕರಪ್ಪ**

ಈಗ ಫೊಂಟೊಾನಲ್ಲ ಇವ ನೋಡೂದಕ್ಕ, ಅವಳೇ.....ಅವಳೇ.....ಮಲ್ಲಪ್ಪನ ತಂಗಿ ಸರೋಜಾ....ಸರೋಜಾ ಅಂತ....

**ಮಹಾಲಿಂಗಪ್ಪ**

(ಕೌತುಕದಿಂದ) ಹೌದೇನೋ ಸದಾ ?

(ಸದಾಶಿವ ಮುಗುಳ್ನಗುತ್ತಾ ಒಳಗಡೆ ಹೋಗುವನು)

**ಶಂಕರಪ್ಪ** .

ಇದೇ ಈಗ ನಾ ಹೇಳುತ್ತಿದ್ದಿನಲ್ಲಾ, ಸದಾಶಿವಗ ಪ್ರೇಮರೋಗ ಬಂದೈತಿ ಅಂತ. ಈಗಾದರೂ ಗೊತ್ತಾತೇನು ನಿನಗ, ಅದೆಂಥಾ ರೋಗ ಅನ್ನೂದು ?

**ಮಹಾಲಿಂಗಪ್ಪ** :

(ನಗುತ್ತಾ) ಗೊತ್ತಾತು ಬಿಡಪಾ, ಚಲೋ ಗೊತ್ತಾತು. ಹಿಂಗೆಲ್ಲಾ ಐತಿ ಅಂತ ನನಗಾದರೂ ಹೆಂಗ ಗೊತ್ತಾಗಬೇಕು ಹೇಳು. ಇವ ಒಂದು ಬಾರೆ ಆದ್ರೂ ಬಾಯಿಬಿಟ್ಟು ಮಾತಾಡಿಯಾನೇನ ನನ್ನ ಮುಂದ? ಅಲ್ಲವಾ, ಶಂಕರಪ್ಪಾ, ಇವ ಪಟ್ಟಣದಾಗಿರುವಾಗ ಈ ಹುಡುಗೀದೂ ಇವಂದೂ ಪಿರೀತಿ ಕೂಡೈತ್ಯೋ ಏನೋ.

**ಶಂಕರಪ್ಪ** :

ಹೌದು. ಆಗಲೇ ಇಬ್ಬರಿಗೂ ಪ್ರೀತಿ ಬೆಳೆದದ್ದು. ಆ ಹುಡುಗಿಯ ತಾಯಿಗೂ ಮಗಳನ್ನ ಇವನಿಗೇ ಕೊಡುವ ಮನಸ್ಸಿತ್ತಂತೆ.

**ಮಹಾಲಿಂಗಪ್ಪ :**

ಹಾಂಗಾದರ ಇವ ಯಾಕ ಸುಮ್ನಿಸಿದ್ದಾನ ಇನ್ನೂ? ಯಾವ ಹುಡುಗಿ ಯಾಕಾಗಲೊಲ್ಲದಪಾ, ಅಂತೂ ಇವ ಒಮ್ಮೆ ಮದುವಿ ಮಾಡಿಕೊಂಡು ಹೆಂಡತೀ ಕರಕೊಂಡು ಬಂದರ ಸಾಕಾಗ್ತೈತಿ ನನಗ. ಈಗ ನೀನು ನೋಡಿದೆಲ್ಲಾ, ರೊಟ್ಟಿ ಮಾಡೂ ತ್ರಾಸ.

**ಶಂಕರಪ್ಪ :**

ಆ ಪಟ್ಟಣದ ಹುಡುಗೀನ್ನ ಇವ ಮಾಡಿಕೊಂಡು ಬಂದರೂ ಇವನೇ ರೊಟ್ಟಿ ಮಾಡುವ ಪ್ರಸಂಗ ಬರುತ್ತೈತ್ಯೋ ಏನೊ.

**ಮಹಾಲಿಂಗಪ್ಪ :**

ಇವಾ ಯಾಕ ಮಾಡಬೇಕು? ಅವಳಿಗೇನು ರೊಟ್ಟಿ ಮಾಡೂದಕ್ಕ ಕೂಡಾ ಬರೂದಿಲ್ಲಂತೀಯೇನ?

**ಶಂಕರಪ್ಪ :**

ಯಾರಿಗ್ಗೊತ್ತಪಾ, ಪಟ್ಟಣದಾಗ ಬೆಳೆದ ಹುಡುಗೀರಿಗೆ ಸಿಂಗಾರ ಮಾಡಿಕೊಂಡು ಸಿನಿಮಾ ನಾಟಕ ಅಂತ ತಿರುಗೂದು ಬಿಟ್ಟರೆ ಬ್ಯಾರೆ ಯಾವ ಕೆಲಸಾನೂ ಬರೂದಿಲ್ಲಂತ ಹೇಳ್ತಾರೆ.

**ಮಹಾಲಿಂಗಪ್ಪ :**

ಇವರು ಹೀಂಗ ತಿರುಗಿಕೊಂಡಿದ್ದರೆ ಮನ್ಯಾಗ ಅಡಿಗೀ ಮಾಡುವರು ಯಾರೋ? ಇವರೆಲ್ಲಾ ಖಾನಾವಳಿಯೊಳಗೆ ಉಣ್ಣುತಾರೋ ಏನೊ?

**ಶಂಕರಪ್ಪ :**

ಎಷ್ಟೋ ಮಂದಿ ಖಾನಾವಳಿಯಿಂದಾ ಡಬ್ಬಿ ತರಿಸುತಾರಂತ. ಎಷ್ಟೋ ಮಂದಿ ಅಡಿಗೀ ಮಾಡೂದಕ್ಕ ಆಳುಗಳನ್ನಿಟ್ಟುಕೋತಾರಂತ.

**ಮಹಾಲಿಂಗಪ್ಪ :**

ಅಡಿಗೀ ಮಾಡೂದಕ್ಕೂ ಆಳು ಬೇಕೇನ ಇವರಿಗೆ? ಬಲೆ ಮಜಾನೆ ಐತಿ ಬಿಡಪಾ ಈ ಪಟ್ಟಣದ ಮಂದೀದು! ಅಲ್ಲೋ ಶಂಕರಪ್ಪಾ, ಈ ಸರ್ಜಾ ಹುಡುಗೀನೂ ಇಂಥಾಕೀನೇ ಅದಾಳೋ ಏನೋ ಯಾಂಬಲ್ಲ!

**ಶಂಕರಪ್ಪ :**

ಇದ್ದರೂ ಇರಬಹುದು. ನನಗೂ ಗೊತ್ತಿಲ್ಲ ನೆಟ್ಟಗ. ನಾನೂ ನೋಡಿಲ್ಲ ಆಕೀನ್ನ.

**ಮಹಾಲಿಂಗಪ್ಪ :**

ಒಂದುವ್ಯಾಳೆ ಇವಳೂ ಅಂಥಾಕೀನಃ ಇದ್ದರ ನಮ್ಮ ಸದಾಶಿವನ ತ್ರಾಸ ತಪ್ಪುವ ಹಾಂಗಿಲ್ಲ ಅನ್ನೂದು ಖರೆ. ಇಂಥಾಕೀನ್ನ ತಂದು ಉಪಯೋಗನೂ ಇಲ್ಲ.

**ಶಂಕರಪ್ಪ :**

ಮದುವೆಯಾಗೂದಾದರ ಅವಳನ್ನೇ ಆಗುತೀನಿ, ಇಲ್ಲದಿದ್ದರ ಬ್ರಹ್ಮಚಾರಿ ಯಾಗಿರುತೀನಿ ಅಂತಾನಲ್ಲ ಸದಾಶಿವ!

**ಮಹಾಲಿಂಗಪ್ಪ :**

ಹೀಂಗ ಅಂದನೇನ ನಿನ್ನ ಮುಂದ! ಹಂಗಾದರೆ ಬಲೆ ಪಂಚೇತಿ ಬಂತು ಬಿಡಪಾ. ಇವಗೆಲ್ಲಿ ಗಂಟುಬಿತ್ತೋ ಈ ಹುಚ್ಚು! ತಾ ನೋಡಿದರ ಒಕ್ಕಲು ತನಕ್ಕ ನಿಂತಾನ. ಮನೀಕೆಲಸಾ ಹೊಲದ ಕೆಲಸಾ ಎರಡೂ ನೋಡಿಕೊಂಡು ಹೋಗುವಂಥಾ ಗಟ್ಟಿ ಹೆಂಡತಿ ಬಂದರ ಇವಂದೂ ಒಂದು ಬಾಳೀವು ಆದೀತು. ಈ ಪಟ್ಟಣದ ಗೊಂಬಿ ಬಂದು ಪಡಸಾಲ್ಯಾಗ ಪಿಯಾನೋ ಬಾರಿಸಿಕೊಂತ ಕುಂತರ ಇವ ನಾಕು ದಿನದಾಗ ದಿವಾಳಿ ತಗದು ಮಂಗ್ಯಾ ಆಗಿ ಹೋದಾನು.

**ಶಂಕರಪ್ಪ :**

ಹೌದೌದು ದೊಡ್ಡಪ್ಪಾ. ನೀ ಹೇಳೂದು ಖರೆ. ಹಳ್ಳಿ ಊರೊಳಗೆ ಸಂಸಾರ ನೆಟ್ಟಗ ನಡಸೂದಕ್ಕ ಹಳ್ಳೀ ಹುಡುಗೇರಃ ಬೇಕು.

**ಮಹಾಲಿಂಗಪ್ಪ :**

ರಾಮಾಪುರದ ಬಸನಗೌಡರ ಮಗಳು ಚೆನ್ನವ್ವ ಇದ್ದಾಳಲ್ಲಾ. ಒಳ್ಳೇ ಗಟ್ಟಿ ಮುಟ್ಟಿ ಹುಡುಗಿ. ಗುಣಾ ನಡತೆ ಎಲ್ಲಾ ಚಲೋದು. ಒಂದೆರಡು ಯತ್ತೆ

ಸಾಲೀನೂ ಕಲಿತಾಳೆ. ಅವಳನ್ನ ತಗೊಳ್ಳಿರಂತ ಬಸನಗೌಡರು ಬಾಳ ದಿನದಿಂದ ದುಂಬಾಲ ಬಿದ್ದಾರ. ಮಗಳ ಹೆಸರಿನಾಗ ಹತ್ತು ಎಕರೆ ಹೊಲಾನೂ ಬರದುಕೊಡೂದಕ್ಕ ತಯಾರದಾರು. ನಮ್ಮ ಸದಾಗ ಹೇಳಿ ಹೇಳಿ ಗಂಟಲು ಹರಿದುಹೋತು. ಅಂವ ಹೂಂನೂ ಅನ್ನವಲ್ಲ, ಚೂಂನೂ ಅನ್ನವಲ್ಲ.

**ಶಂಕರಪ್ಪ:**

ಅವನ ಮನಸಿನಾಗೆಲ್ಲಾ ಈ ಸರೋಜಾ ತುಂಬಿರುವಾಗ ಬ್ಯಾರೆ ಹೆಣ್ಣು ಮಾಡಿಕೊಳ್ಳುವ ವಿಚಾರ ಆದರೂ ಹ್ಯಾಂಗ ಬಂದೀತು ದೊಡ್ಡಪ್ಪಾ?

[ಮುಖ ತೊಳೆದು, ಕ್ರಾಪ್ ತಿದ್ದಿಕೊಂಡು, ಬಟ್ಟೆ ಬದಲಿಸಿಕೊಂಡು ಸದಾಶಿವ ಬರುವನು]

**ಸದಾಶಿವ:**

ಏಳು ಶಂಕರಪ್ಪಾ, ಊಟ ಮಾಡೇಳು.

**ಶಂಕರಪ್ಪ:**

ಹೂಂ. ನೀ ರೊಟ್ಟೀ ಮಾಡಿದ್ದೀ, ನಾ, ಊಟಕ್ಕೇಳುತೀನಿ! ಯಾರಾದರೂ ನಕ್ಕಾರು ಕೇಳಿದವರು. ಮದುವೀ ಮಾಡಿಕೊಂಡು ಹೆಂಡತೀ ಕರಕೊಂಡು ಬಾ ಮೊದಲು. ಆಮ್ಯಾಲ ಊಟಕ್ಕ ಕರಿ. ಹೂಂ. ನಾನೀಗ ಹೋಗ್ತೀನಿ. ವ್ಯಾಳ್ಯೆ ಆತು. (ಏಳುವನು)

**ಸದಾಶಿವ:**

ಕೂಡಲ್ಲಾ ಸ್ವಲ್ಪ. ಏನು ಅವಸರ? ನಾನೂ ನಾಸಿವೇಹಳ್ಳಿಗೆ ಹೋಗಬೇಕು.
(ಮಹಾಲಿಂಗಪ್ಪ ಎದ್ದು ಒಳಗೆ ಹೋಗುವನು)

**ಶಂಕರಪ್ಪ:**

ಅಲ್ಲಪಾ ಸದಾಶಿವ, ಕಡೆಗೆ ಏನು ವಿಚಾರಮಾಡಿದಿ?

**ಸದಾಶಿವ:**

ಯಾತರ ವಿಚಾರಾ?

**ಶಂಕರಪ್ಪ:**

ಮತ್ತ್ಯಾತರ ವಿಚಾರ? ನಿನ್ನ ಮದುವೀದು. ನಿಮ್ಮಪ್ಪಗ ಅದರದಃ ಚಿಂತಿ

ಯಾಗ್ಯೆತಿ. ರಾಮಾಪುರದ ಗೌಡರ ಮಗಳನ್ನ ನಿನಗ ಕೊಡಬೇಕಂತ ಮಾಡಿದ್ದಾರಂತಲ್ಲ? ಏನಾಗ್ಯೆತಿ ಆ ಹುಡುಗಿಗೆ? ಯಾಕ ಮಾಡಿಕೋ ಬಾರದು?

**ಸದಾಶಿವ:**

ಆ ಹುಡುಗಿಗೇನೂ ಆಗಿಲ್ಲ. ರೈತನೊಬ್ಬನ ಹೆಂಡತಿಯಾಗುವುದಕ್ಕೆ ಅವಳು ಯೋಗ್ಯಳಿದ್ದಾಳೆ. ಎಲ್ಲಾ ನಿಜ. ನಾನೂ ಅವಳನ್ನು ಮದುವೆಯಾಗ ಬಹುದಿತ್ತು. ಆದರೆ....ನಿನಗೂ ಗೊತ್ತಿದೆಯಲ್ಲ ಶಂಕರಪ್ಪಾ. ಮತ್ತೆ ಮತ್ತೆ ಕೇಳುವದರಲ್ಲೇನು ಅರ್ಥ?

**ಶಂಕರಪ್ಪ:**

ಅಂತೂ ನೀನು ಆ ಸರೋಜಳ ಹುಚ್ಚು ಬಿಡುವ ಹಾಂಗ ಕಾಣೂದಿಲ್ಲ. ಅಲ್ಲಾ, ಅವಳೇನೋ ಮದುವೀನಃ ಮಾಡಿಕೊಳ್ಳೂದಿಲ್ಲಂತಾಳಂತಲ್ಲ?

**ಸದಾಶಿವ.**

ಅನ್ನುತ್ತಾಳೆ, ನಿಜ. ಬಾಯಿಂದ ಅನ್ನುತ್ತಾಳೆ. ನಿನಗೆ ಗೊತ್ತಿಲ್ಲವೇನು ಶಂಕರಪ್ಪ? ಹೆಂಗಸರ ಮನಸ್ಸಿನಲ್ಲಿರುವದೇ ಒಂದು, ಅವರು ಬಾಯಿಂದ ಆಡುವದೇ ಇನ್ನೊಂದು.

**ಶಂಕರಪ್ಪ:**

ಎಷ್ಟು ದಿನಾ ಅಂತ ಅವಳಿಗಾಗಿ ಕಾಯುತಾ ಕೂಡುವವ ನೀ ಹೀಂಗ?

**ಸದಾಶಿವ:**

(ನಕ್ಕು) ಇನ್ನೇನು ಬಹಳ ದಿನ ಹಿಡಿಯಲಿಕ್ಕಿಲ್ಲ. ಕಾಯಿ ಹಣ್ಣಾಗುವದಕ್ಕೆ ಎಷ್ಟುದಿನ ಬೇಕು?

**ಶಂಕರಪ್ಪ:**

ಆದರೂ ಈ ಪಟ್ಟಣದ ಹುಡುಗೀನ್ನ ಕಟ್ಟಿಕೊಳ್ಳುವದರಿಂದ ನಿನ್ನ ಬಾಳೇವು ನೆಟ್ಟಗಾದೀತಂತ ನನಗೇನೂ ಅನ್ನಿಸೂದಿಲ್ಲ. ನಿಮ್ಮ ಅಪ್ಪನಿಗೂ ಅದೇ ಚಿಂತೆ.

**ಸದಾಶಿವ:**

ಅವಳಿಂದ ಆ ಹೊಲಮನೆಯ ಕೆಲಸ ಆಗಲಿಕ್ಕಿಲ್ಲ ಅಂತ ಹೌದಲ್ಲೊ ನೀವು

ಹೇಳುವದು? ಯಾವ ಕೆಲಸವೂ ಒಮ್ಮೆಲೆ ಬರುವದಿಲ್ಲ ಶಂಕರಪ್ಪಾ. ಅದಕ್ಕು ಸ್ವಲ್ಪ ಟ್ರೇನಿಂಗ್ ಬೇಕಾಗುತ್ತದೆ. ನಿಮ್ಮ ಟ್ರೇನಿಂಗ್ ಇದ್ದ ಹಾಗೇ ಇದೂ.

**ಶಂಕರಪ್ಪ :**

ಏನೋಪಾ. ನನಗಂತೂ ಭರವಸೆ ಇಲ್ಲ. (ಸ್ವಲ್ಪ ತಡೆದು) ಆದರೂ ಮದುವಿ ಯಾಗುವವ ನೀನು. ಸುಖಾ ನಿನ್ನ ಸಂತೋಷ ಮುಖ್ಯ. ಅಂತೂ ನೀನು ಲಗೂ ಸಂಸಾರಿಯಾದರ ನಮಗೂ ಸಂತೋಷ. ಹೂಂ. ನಾನೀಗ ನಡೀ ತೀನಿ. ಸಾಸಿವೇಹಳ್ಳಿಯಿಂದ ಯಾವಾಗ ಬರುತೀ?

**ಸದಾಶಿವ :**

ಈಗ ಹೋಗಿ ನಾಳೆ ಬಂದು ಬಿಡುತೇನೆ.

( ತೆರೆ )

## ದೃಶ್ಯ ಎರಡು

[ಸಾಸಿವೇಹಳ್ಳಿಯಲ್ಲಿ ರಸ್ತೆ. ಮಲ್ಲಪ್ಪ, ಅವನ ಹೆಂಡತಿ ಪಾರ್ವತಿ ಮಾತಾಡುತ್ತ ಬರುವರು. ಮಲ್ಲಪ್ಪ ರೈತವೇಷದಲ್ಲಿದ್ದಾನೆ. ಪಾರ್ವತಿ ಒರಟುಸೀರೆ, ಕುಬುಸ ಧರಿಸಿದ್ದಾಳೆ. ಇಬ್ಬರೂ ಕೈಯಲ್ಲಿ ತುರುಪಿ ಹಿಡಿದಿದ್ದಾರೆ.]

**ಮಲ್ಲಪ್ಪ :**

ಸರೋಜಾ ಎಲ್ಲಿ ಹೋದಳೇ?

**ಪಾರ್ವತಿ :**

ಅವಳು ಹೋಗೂದಕ್ಕೊಂದು ನೇಮ ಐತೇನು? ಆ ಸದಾಶಿವ ಬಂದ, ಅವನ ಹಿಂದೆ ಹೊಂಟುಬಿಟ್ಟಳು ತಿರುಗೂದಕ್ಕ. ತೋಟದ ಕಡೆ ಹೋಗಿರ ಬೇಕು.

**ಮಲ್ಲಪ್ಪ :**

ಪಾಪ, ಹೋಗಲಿ ಬಿಡೇ. ಪಟ್ಟಣದ ಹುಡುಗಿ. ಈ ಕಗ್ಗಹಳ್ಳಿಯೊಳಗೆ

ಇವಳಿಗೂ ಜೀವ ರಮಿಸೂದು ಕಷ್ಟ. ಸದಾಶಿವನೂ ಉತ್ತಮ ಹುಡುಗ. ಬುದ್ಧಿವಂತ. ಅವನ ಸಂಗಡ ತಿರುಗಾಡಿದರೇನೂ ತಪ್ಪಲ್ಲ. ಅವನಿಗೂ ಅವಳಿಗೂ ಮೊದಲಿಂದಾ ಗುರುತು.

**ಪಾರ್ವತಿ :**

ಗುರುತಿದ್ದರೇನಾತು? ನೀವೂ ಚಲೋನಃ ಹೇಳ್ತೀರಲ್ಲಾ ಇಷ್ಟುದ್ದ ಬೆಳೆದು ಕುಂತಾಳ. ಇನ್ನೂ ಮದುವಿ ಕೂಡ ಆಗಿಲ್ಲ. ಇಂಥಾಕಿ ಗಂಡುಬೀರಿಯ ಹಂಗ ಗಂಡಸರ ಸಂಗಡ ತಿರುಗೂದಂದರೇನು? ಪಟ್ಟಣದಾಗೇನೋ ನಾಚಿಕಿಲ್ಲದ ಮಂದಿ ಹಿಂಗೆಲ್ಲಾ ತಿರುಗತಿದ್ದೀತು. ಹಳ್ಳೀ ಊರಾಗ ಹೀಂಗ ಮಾಡಿದರ ನಡದೀತೇನು? ನೋಡಿದವರೇನಂದಾರು? ನಮ್ಮ ಮಾನಾ ಕಳದಾಳು ಎಲ್ಲ್ಯಾದರೂ.

**ಮಲ್ಲಪ್ಪ :**

(ಬೇಸರದಿಂದ) ಸರೋಜಾ ಅಂದರ ನಿನಗ ಆಗೂದಿಲ್ಲ. ಸದಾಶಿವ ಏನು ಬ್ಯಾರೆಯವನೇನು? ಅವನೂ ನಮ್ಮವನಃ. ಅವನ ಸಂಗಡ ತಿರುಗಾಡಿದರ ಮಾನ ಯಾಕ ಹೋದೀತು?

**ಪಾರ್ವತಿ :**

ನಮ್ಮವನಃ ಅನ್ನೂದೇನೋ ಖರೆ. ಕೇಳಿ, ಸರ್ಜೀನ್ನ ಮದುವೀ ಮಾಡಿಕೋತಾನೇನು?

**ಮಲ್ಲಪ್ಪ :**

ಅವಳನ್ನ ಆದಷ್ಟು ಲಗೂ ಮನೀ ಬಿಡಿಸಿ ಕಳಿಸಬೇಕಂತ ಮಾಡೀ ಹಾದಲ್ಲೊ?

**ಪಾರ್ವತಿ :**

ನಾನ್ಯಾಕ ಕಳಿಸಲಿ? ನಿಮ್ಮ ಮನಿ, ನಿಮ್ಮ ತಂಗಿ. ಇನ್ನೂ ಆರೇಳು ವರ್ಷದ ಕೂಸು ಪಾಪ! ಮುದ್ದು ಮಾಡುತಾ ಇಟ್ಟುಕೊಂಡಿರ್ರಿ ಮನಿಯಾಗ.

**ಮಲ್ಲಪ್ಪ :**

ಬೆಳೆದ ಹುಡುಗಿ ಅನ್ನೂದೇನೋ ಖರೆ. ಮದುವೀ ಮಾಡಬೇಕು ಅನ್ನೂದೂ

ಖರೆ. ಎಲ್ಲಾದಕ್ಕೂ ಒಂದುವ್ಯಾಳೆ ಬರಬೇಕಲ್ಲ ಪಾರ್ವತೀ. ಹಿಂಗ ಅವಸರ ಮಾಡಿದರ ಹೆಂಗಾದೀತು?

**ಪಾರ್ವತಿ:**

ಅವಸರ ಮಾಡದಿದ್ದರ ಇವಳ ತಲೀಮ್ಯಾಲ ಅಕ್ಕೀಕಾಳು ಬೀಳೂದು ಯಾವಾಗೋ! ಇವಳನ್ನ ನೋಡಿ ಊರವರೆಲ್ಲಾ ನಗಾಕ ಹತ್ತಿದಾರ. ನಿಮಗ ಅದೆಲ್ಲಾ ಏನ ತಿಳೀತೈತಿ? ಹೂಂ. ಸದಾಶಿವನ್ನ ಕೇಳಿಬಿಡ್ರಲ್ಲಾ. ಒಮ್ಮೆ.

**ಮಲ್ಲಪ್ಪ:**

ಕೇಳೀನು ಅನ್ನು. ಅವ ಒಪ್ಪಲಿಲ್ಲಾ ಅನ್ನು. ಮುಂದ?

**ಪಾರ್ವತಿ:**

ಯಾಕ ಒಪ್ಪೂದಿಲ್ಲ? ಎಲ್ಲಾ ಒಪ್ಪುತಾನ. ಮೊನ್ನೆ ಅವ ಬಂದಾಗ ಅದೂ ಇದೂ ಮಾತು ತಗದು ನಾ ಕೇಳಿಕೊಂಡೀನಿ ಅವನ್ನ. ಚಲೋ ಹೆಣ್ಣು ಸಿಕ್ಕರ ಮದುವೀ ಮಾಡಿಕೋಬೇಕು ಅಂತ ಅವನೂ ವಿಚಾರ ಮಾಡಿದ್ದಾನಂತ.

**ಮಲ್ಲಪ್ಪ:**

ಸರೋಜನ್ನ ಮಾಡಿಕೋ ಅಂತ ಕೇಳಿದೇನು ನೀ?

**ಪಾರ್ವತಿ:**

ಹಾಂಗ ಅವಳ ಹೆಸರೇನೂ ತಗೀಲಿಲ್ಲ. ಮೆಲ್ಲಕ ಮಾತಾಡಿ ಅವನ ಮನಸ್ಸಿನಾಗೇನೈತಿ ಅಂತ ತಿಳಕೊಂಡೀನಿ.

**ಮಲ್ಲಪ್ಪ:**

ಅವ ಸರೋಜನ್ನ ಆಗುತೀನಿ ಅಂದರ ಬಾಳ ಚಲೋ ಆಗುತೈತಲ್ಲ? ಅವಳಿಗೂ ಇವನಂಥಾ ವರಾ ಎಲ್ಲಿ ಸಿಕ್ಕೀತು?

**ಪಾರ್ವತಿ:**

ಅವನಿಗಾದರೂ ಇವಳಂಥಾ ಕನ್ಯಾ ಎಲ್ಲಿ ಸಿಕ್ಕೀತು? ನೀವು ಕೇಳಿ ನೋಡಬಾರದೇನು? ಸುಮ್ಮನs ಕುಂತೀರಲ್ಲ?

ಇವಳಿಗೂ ಜೀವ ರಮಿಸೂದು ಕಷ್ಟ. ಸದಾಶಿವನೂ ಉತ್ತಮ ಹುಡುಗ. ಬುದ್ಧಿವಂತ. ಅವನ ಸಂಗಡ ತಿರುಗಾಡಿದರೇನೂ ತಪ್ಪಲ್ಲ. ಅವನಿಗೂ ಅವಳಿಗೂ ಮೊದಲಿಂದಾ ಗುರುತು.

**ಪಾರ್ವತಿ :**

ಗುರುತಿದ್ದರೇನಾತು? ನೀವೂ ಚಲೋನಃ ಹೇಳ್ತೀರಲ್ಲಾ ಇಷ್ಟುದ್ದ ಬೆಳೆದು ಕುಂತಾಳ. ಇನ್ನೂ ಮದುವಿ ಕೂಡ ಆಗಿಲ್ಲ. ಇಂಥಾಕಿ ಗಂಡುಬೀರಿಯು ಹಂಗ ಗಂಡಸರ ಸಂಗಡ ತಿರುಗೂದಂದರೇನು? ಪಟ್ಟಣದಾಗೇನೋ ನಾಚಿಕಿಲ್ಲದ ಮಂದಿ ಹಿಂಗೆಲ್ಲಾ ತಿರುಗತಿದ್ದೀತು. ಹಳ್ಳೀ ಊರಾಗ ಹೀಂಗ ಮಾಡಿದರ ನಡದೀತೇನು? ನೋಡಿದವರೇನಂದಾರು? ನಮ್ಮ ಮಾನಾ ಕಳದಾಳು ಎಲ್ಲ್ಯಾದರೂ.

**ಮಲ್ಲಪ್ಪ :**

(ಬೇಸರದಿಂದ) ಸರೋಜಾ ಅಂದರ ನಿನಗ ಆಗೂದಿಲ್ಲ. ಸದಾಶಿವ ಏನು ಬ್ಯಾರೆಯವನೇನು? ಅವನೂ ನಮ್ಮವನಃ. ಅವನ ಸಂಗಡ ತಿರುಗಾಡಿದರ ಮಾನ ಯಾಕ ಹೋದೀತು?

**ಪಾರ್ವತಿ :**

ನಮ್ಮವನಃ ಅನ್ನೂದೇನೋ ಖರೆ. ಕೇಳಿ. ಸರ್ಜೀನ್ನ ಮದುವೀ ಮಾಡಿ ಕೊಡ್ತಾನೇನು?

**ಮಲ್ಲಪ್ಪ :**

ಅವಳನ್ನ ಆದಷ್ಟು ಲಗೂ ಮನೀ ಬಿಡಿಸಿ ಕಳಿಸಬೇಕಂತ ಮಾಡೀ ಹೌದಲ್ಲೊ?

**ಪಾರ್ವತಿ :**

ನಾನ್ಯಾಕ ಕಳಿಸಲಿ? ನಿಮ್ಮ ಮನಿ, ನಿಮ್ಮ ತಂಗಿ. ಇನ್ನೂ ಆರೇಳು ವರ್ಷದ ಕೂಸು ಪಾಪ! ಮುದ್ದು ಮಾಡುತಾ ಇಟ್ಟುಕೊಂಡಿರ್ರಿ ಮನಿಯಾಗ.

**ಮಲ್ಲಪ್ಪ :**

ಬೆಳೆದ ಹುಡುಗಿ ಅನ್ನೂದೇನೋ ಖರೆ. ಮದುವೀ ಮಾಡಬೇಕು ಅನ್ನೂದೂ

ಖರೆ. ಎಲ್ಲಾದಕ್ಕೂ ಒಂದುವ್ಯಾಳೆ ಬರಬೇಕಲ್ಲ ಪಾರ್ವತೀ. ಹೀಂಗ ಅವಸರ ಮಾಡಿದರ ಹೆಂಗಾದೀತು?

**ಪಾರ್ವತಿ:**

ಅವಸರ ಮಾಡದಿದ್ದರ ಇವಳ ತಲೀಮ್ಯಾಲ ಅಕ್ಷೀಕಾಳು ಬೀಳೂದು ಯಾವಾಗೋ! ಇವಳನ್ನ ನೋಡಿ ಊರವರೆಲ್ಲಾ ನಗಾಕ ಹತ್ತಿದಾರ. ನಿಮಗ ಅದೆಲ್ಲಾ ಏನ ತಿಳೀತ್ತೈತಿ? ಹೂಂ ಸದಾಶಿವನ್ನ ಕೇಳಿಬಿಡಿರಲ್ಲ. ಒಮ್ಮೆ.

**ಮಲ್ಲಪ್ಪ:**

ಕೇಳೇನು ಅನ್ನು. ಅವ ಒಪ್ಪಲಿಲ್ಲಾ ಅನ್ನು. ಮುಂದ?

**ಪಾರ್ವತಿ:**

ಯಾಕ ಒಪ್ಪೂದಿಲ್ಲ? ಎಲ್ಲಾ ಒಪ್ಪುತಾನ. ಮೊನ್ನೆ ಅವ ಬಂದಾಗ ಅದೂ ಇದೂ ಮಾತು ತಗದು ನಾ ಕೇಳಿಕೊಂಡೀನಿ ಅವನ್ನ. ಚಲೋ ಹೆಣ್ಣು ಸಿಕ್ಕರ ಮದುವೀ ಮಾಡಿಕೋಬೇಕು ಅಂತ ಅವನೂ ವಿಚಾರ ಮಾಡಿದ್ದಾನಂತ.

**ಮಲ್ಲಪ್ಪ:**

ಸರೋಜನ್ನ ಮಾಡಿಕೋ ಅಂತ ಕೇಳಿದೇನು ನೀ?

**ಪಾರ್ವತಿ:**

ಹಾಂಗ ಅವಳ ಹೆಸರೇನೂ ತಗೀಲಿಲ್ಲ. ಮೆಲ್ಲಕ ಮಾತಾಡಿ ಅವನ ಮನಸ್ಸಿನಾಗೇನೈತಿ ಅಂತ ತಿಳಕೊಂಡೀನಿ.

**ಮಲ್ಲಪ್ಪ:**

ಅವ ಸರೋಜನ್ನ ಆಗುತೀನಿ ಅಂದರ ಬಾಳ ಚಲೋ ಆಗುತ್ತೈತಲ್ಲ? ಅವಳಿಗೂ ಇವನಂಥಾ ವರಾ ಎಲ್ಲಿ ಸಿಕ್ಕೀತು?

**ಪಾರ್ವತಿ:**

ಅವನಿಗಾದರೂ ಇವಳಂಥಾ ಕನ್ಯಾ ಎಲ್ಲಿ ಸಿಕ್ಕೀತು? ನೀವು ಕೇಳಿ ನೋಡಬಾರದೇನು? ಸುಮ್ಮನಃ ಕುಂತೀರಲ್ಲ?

**ಮಲ್ಲಪ್ಪ :**

ಸ್ವಲ್ಪ ಸಮಾಧಾನದಿಂದಿರು ಪಾರ್ವತೀ. ಮದುವೀ ಮಾತಂದರ ಹುಡುಗಾಟ ಅಲ್ಲ. ಸರೋಜಾ ಮನಸಿನಾಗ ಏನೈತ್ಯೋ ತಿಳಕೋಬೇಕಲ್ಲಾ ಮೊದಲು ?

**ಪಾರ್ವತಿ :**

ಆವಳನ್ನೇನ ಕೇಳೂದು ಇಂಥಾದರಾಗ?

**ಮಲ್ಲಪ್ಪ :**

ಹಾಂಗನ್ನುವಂತಿಲ್ಲ ಪಾರ್ವತೀ. ಅವಳೇನು ನಿನ್ನ ಹಾಂಗ ಹಳ್ಳೀ ಹುಡುಗಿ ಯೇನು? ಪಟ್ಟಣದಾಗ ಬೆಳೆದಾರೆ. ಅವಳ ಮನಸ್ಸಿನ ವಿರುದ್ಧ ನಾವೇನೂ ಮಾಡುವ ಹಾಂಗಿಲ್ಲ.

**ಪಾರ್ವತಿ .**

ಪಟ್ಟಣದಾಗ ಬೆಳೆದವರಿಗೇನ ಕೊಂಬು ಬಂದಿರುತಾವೇನ? ಬಿಡಬಿಡ್ರಿ, ನಾನೂ ನೋಡೀನಿ ಎಷ್ಟೋ ಮಂದೀನ್ನ. ಇವರ ಬಡಿವಾರ ನನ್ನ ಮುಂದ ನಡಿಯೂದಿಲ್ಲ.

**ಮಲ್ಲಪ್ಪ :**

ಆ ಹುಡುಗಿ ಅಂದರ ಹಿಂಗ್ಯಾಕ ಹರಕೊಂಡು ತಿಂದಂಗೆ ಮಾಡುತೀ ನೀ?

**ಪಾರ್ವತಿ :**

ನಾನ್ಯಾಕ ಹರಕೊಂಡು ತಿನ್ನಲಿ ಅವಳನ್ನ? ಇವಳ ಡೌಲೇನ? ಇವಳ ಸೋಕ್ಕೇನ? ಇವಳ ಮಾತೇನ? ದೊಡ್ಡ ರಾಜಕುಮಾರಿಯ ಹಾಂಗ ಮಾಡುತಾಳ.

**ಮಲ್ಲಪ್ಪ :**

ಇನ್ನೂ ಸಣ್ಣಾಕಿ. ಬುದ್ಧಿಯಿಲ್ಲ. ದೊಡ್ಡಾಕಿಯಾದ ಹಾಂಗ ಎಲ್ಲಾ ತಾನೇ ಗೊತ್ತಾಗುತ್ತೈತಿ.

**ಪಾರ್ವತಿ :**

ಪಾಪ, ಸಣ್ಣಾಕಿ!

**ಮಲ್ಲಪ್ಪ :**

ನೀನು ದೊಡ್ಡಾಕಿಯಾಗಿ ಸ್ವಲ್ಪ ತಡಕೊಂಡು ಹೋಗಬಾರದೇನು ?

**ಪಾರ್ವತಿ :**

ಅವಳ ನಡತೀ ರೀತೀ ನೋಡಿದರ ನನ್ನ ತಲೀ ಕೆಡುತ್ತೈತಿ.

**ಮಲ್ಲಪ್ಪ .**

ಅಂಥಾದ್ದು ಮಾಡಬಾರದ್ದು ಏನು ಮಾಡಿದಾಳ? ಏನ್ನೋ ಪುಸ್ತಕಾ ಹಿಡಕೊಂಡು ಓದುತಾ ಕುಂತಿರುತಾಳ. ಬಾಳ ಬ್ಯಾಸರಾದಾಗ ಹಾಡಿಕೊಂತಾಳ. ಅದರಿಂದ ಯಾರದೇನು ಗಂಟು ಹೋಗತೈತಿ ?

**ಪಾರ್ವತಿ :**

ಇವಳು ಓದಿಕೊಂತ ಹಾಡಿಕೊಂತ ಕುಂತರ ಇವಳಿಗೆ ರೊಟ್ಟೀಮಾಡಿ ಹಾಕುನರು ಯಾರು? ತಾನೂ ಏನಾರೆ ಸ್ವಲ್ಪ ಕೆಲಸಾ ಮಾಡಬೇಕೋ ಬ್ಯಾಡೋ ?

**ಮಲ್ಲಪ್ಪ :**

ಮಾಡುತಾಳೀಳು. ಇನ್ನೂ ಇಲ್ಲಿಗೆ ಬಂದು ಆರು ತಿಂಗಳಾಗಿಲ್ಲ. ಎಲ್ಲ ಹೊಸಾ ಕೆಲಸ. ಸ್ವಲ್ಪ ರೂಢಿಯಾದ್ರೂ ಆಗಲಿ ಅವಳಿಗೆ.

**ಪಾರ್ವತಿ :**

ಆರು ತಿಂಗಳಾದ್ರೂ ಇನ್ನೂ ರೂಢಿ ಆಗೂದು ಯಾವಾಗ ಅಂತೀನಿ? ಮನಿಯ ಕಸಾ ಕೂಡಾ ಉಡುಗೂದಕ್ಕ ಬರೂದಿಲ್ಲಲ್ಲ ಈ ಗೊಂಬಿಗೆ!

**ಮಲ್ಲಪ್ಪ :**

(ರೇಗಿ) ನೀನೂ ಬಾಳ ಹದ್ದುಮೀರಿ ಹೋಗುತೀ. ಆ ಹುಡುಗೀನ್ನ ಮನೀ ಬಿಡಿಸಿ ಕಳಿಸಿದಾಗs ಸಮಾಧಾನ ಆಗೂದು ನಿನಗ.

**ಪಾರ್ವತಿ .**

ಮದುವೀ ಮಾಡಿಕೊಟ್ಟು ಬಿಟ್ಟರ ತಾನೇ ಹೋಗುತಾಳ.

ಮಲ್ಲಪ್ಪ :

ಉಪ್ಪಾರದವ ಜಪ್ಪೋ ಆಗುತ್ತೈತಿ. ಎದ್ದ ಕೂಡಲೆ ನಿಮ್ಮಿಬ್ಬರ ಜಗಳಾ ನೋಡೂದು ತಪ್ಪುತ್ತೈತಿ.

ಪಾರ್ವತಿ :

ನಾನ್ಯಾಕೆ ಜಗಳಾ ಮಾಡಲಿ? ನನಗೇನು ಬ್ಯಾರೆ ಕೆಲಸ ಇಲ್ಲೇನು? ಇವಳದೇ ಸೊಕ್ಕು ಎಲ್ಲಾ. ಹಕ್ಕಿಯೊಳಗಿನ ನೆಗಣೀ ಹೊರೂದು ಅಂದರ ಇವಳ ಮಾನಕ್ಕ ಕಡಿಮಿ ಅಂತ!

ಮಲ್ಲಪ್ಪ

ನೀನೆರೆ ನೆಗಣೇ ಹೊರೂ ಕೆಲಸಾ ಯಾಕ ಹಚ್ಚುತೀ ಅವಳಿಗೆ! ಎಂದಾದರೂ ನೆಗಣ ಹಿಡಿದಪ್ಪೇ ಆ ಹುಡುಗಿ! ಪಾಪ!

ಪಾರ್ವತಿ.

ನಾಳೆ ಮದಿವೆಯಾದ ಮ್ಯಾಲ ಆಗುತ್ತೈತಿ ಫಜೀತಿ ಅವಳಿಗೆ. ನಾನೆರೆ ಹೇಳಿ ಏನು ಬಂತು?

(ಕೊ[illegible]ಂದ ತಾ[illegible]ಗುವಳು. ಇನ್ನೊಂದು ಕಡೆಯಿಂದ ಸದಾಶಿವ ಬರುವನು.)

ಮಲ್ಲಪ್ಪ.

ಯಾಕ ಸದಾಶಿವಾ? ಸರೋಜ ಎಲ್ಲಿ ಹೋದಳು?

ಸದಾಶಿವ :

ತೋಟಕ್ಕೆ ಹೋಗಿದ್ದೆವು ಕಾಯಿಪಲ್ಯ ತರಲಿಕ್ಕೆ. ಅವಳು ಮುಂದೆ ಹೋದಳು ಮನೆಗೆ.

ಮಲ್ಲಪ್ಪ :

ಪಾರ್ವತಿಯೂ ಇದೇ ಈಗ ಹೋದಳು. ನೋಡಪಾ ಸದಾಶಿವ, ನನಗಂತೂ ಸಾಕುಸಾಕಾಗಿ ಹೋತು – ಇವರಿಬ್ಬರ ಕಾಲಾಗ. ದಿನಾ ಬೆಳಗಾದರ ಅತ್ತಿಗೆ ನಾದಿನಿಯರ ಜಗಳ ಸುರು. ಬೆಕ್ಕಿಗಳ ಕಾದಾಟ ಇದ್ದಂಗ. ಒಬ್ಬಾಕಿ ಮಾಡಿದ್ದು ಇನ್ನೊಬ್ಬಾಕೀಗೆ ಸರಿಕಾಣೂ ಹಂಗಿಲ್ಲ. ಒಬ್ಬಾಕಿ

ಮಾತಾಡಿದ್ದು ಇನ್ನೊಬ್ಬಾಕಿಗೆ ಸಹನ ಆಗುವ ಹಾಂಗಿಲ್ಲ ನನಗಂತೂ ತಲೀ ಚಿಟ್ ಹಿಡಿದು ಹೋಗ್ಯೈತಿ.

**ಸದಾಶಿವ** :

ಹೂಂ. ನಾನೂ ನೋಡಿದೆನಲ್ಲಾ. ಸಹಜವಾಗಿ ಇವರಿಬ್ಬರು ಜಗಳ ಮಾಡಬೇಕಾದ ಅಗತ್ಯವೇ ಇಲ್ಲ. ಇಬ್ಬರೂ ಒಳ್ಳೆಯವರೇ. ಮುಖ್ಯ ಬಂದದ್ದು ಏನಂದರೆ ಸರೋಜ ಪಟ್ಟಣದಲ್ಲಿ ಬೆಳೆದವಳು, ಪಾರ್ವತಿ ಹಳ್ಳಿಯಲ್ಲಿ ಬೆಳೆದವಳು.

**ಮಲ್ಲಪ್ಪ** :

ಪಟ್ಟಣದ ನಾಯಿ ಹಳ್ಳಿಯ ನಾಯಿ ಕಚ್ಚ್ಯಾಡಿದಾಂಗ ನಡದೈತಿ.

**ಸದಾಶಿವ** :

ಹಳ್ಳಿಯನ್ನು ಬಿಟ್ಟು ಪಟ್ಟಣವಿಲ್ಲ. ಪಟ್ಟಣವನ್ನು ಬಿಟ್ಟು ಹಳ್ಳಿಯಿಲ್ಲ. ಎರಡೂ ಕೂಡಿಕೊಂಡು ಹೋದರೇ ದೇಶಕ್ಕೆ ಕ್ಷೇಮ. ಪಟ್ಟಣದ ಜನರು ಹಳ್ಳಿಯವರನ್ನು ತುಚ್ಛವಾಗಿ ಕಾಣಬಾರದು, ಹಳ್ಳಿಯವರು ಪಟ್ಟಣದವರನ್ನು ಕಂಡು ಮೂಗು ಮುರಿಯಬಾರದು. ಅವರಲ್ಲಿರುವ ಒಳ್ಳೆಯ ಗುಣ ಇವರು ಕಲಿಯಬೇಕು, ಇವರಲ್ಲಿರುವ ಒಳ್ಳೆಯ ಗುಣ ಅವರು ಕಲಿಯಬೇಕು. ಸರೋಜಳಿಗೂ ನಾನು ತಿಳಿಸಿ ಹೇಳಿದ್ದೇನೆ. ಪಾರ್ವತಿಗೂ ಹೇಳಿದ್ದೇನೆ. ಆದರೂ ಅವರಿಬ್ಬರಿಗೂ ಮನಸ್ಸೇ ಕೆಟ್ಟಂತೆ ಕಾಣುತ್ತದೆ. ಕೆಟ್ಟು ಹುಳಿಯಾದ ಹಾಲು ಮತ್ತೆ ಸಿಹಿಯಾಗುವದು ಕಷ್ಟ.

**ಮಲ್ಲಪ್ಪ** :

ನೀನನ್ನುವುದು ಖರೇ ಸದಾಶಿವ. ಈಗ ನಾನೇನು ಮಾಡಲಿ ಹೇಳು. ಪಾರ್ವತಿ ತಾನು ದೊಡ್ಡಾಕಿ, ಸೈರಿಸಿಕೋಬೇಕು. ಸರೋಜಾ ತಾನು ಸಣ್ಣಾಕಿ, ಸುಮ್ಮನಿರಬೇಕು. ಅದು ಬಿಟ್ಟು ಇಬ್ಬರೂ ಹುರ್‍ಯೋ ಅಂತ ಜಗಳಕ್ಕ ನಿಲ್ಲುತಾರಲ್ಲಾ....

**ಸದಾಶಿವ :**

ಎಷ್ಟು ದಿನ ಅಂತ ಜಗಳ ಮಾಡುತ್ತಾರೆ ಬಿಡು ಮಲ್ಲಣ್ಣ? ಜಗಳ ಮಾಡಿ ಮಾಡಿ ಅವರಿಗೇ ಬೇಸರವಾಗಿ ಸುಮ್ಮನಾದಾರು.

**ಮಲ್ಲಪ್ಪ :**

ನಾನೂ ಹಂಗೇ ಅಂದುಕೊಂಡು ಇಷ್ಟು ದಿನಾ ಸುಮ್ಮನಿದ್ದೀನಿ. ಆದರ ಆರು ತಿಂಗಳಾದರೂ ಇನ್ನು ಅವರ ಜಗಳ ಬಗೀಹರಿಯಲೊಲ್ಲದು. ದಿನಕ್ಕ ದಿನಾ ಹೆಚ್ಚಾಗಲಿಕ್ಕೆ ಹತ್ತ್ಯೈತಿ. ಸಿಟ್ಟುಬಂದಾಗ ಯಾರಾದರೊಬ್ಬರು ಬಾವೀ ಗೀವೀ ಹಾರಿಕೊಂಡು ಜೀವಾ ಕಳಕೊಂಡು ಕುಂತಾರೋ ಏನೋ ಅಂತ...

**ಸದಾಶಿವ .**

ಹಾಗೇನೂ ಆಗಲಿಕ್ಕಿಲ್ಲ ಅನ್ನು. ಅವರೇನೂ ಅಷ್ಟು ದೂರ ಹೋಗಲಿಕ್ಕಿಲ್ಲ.

**ಮಲ್ಲಪ್ಪ :**

ಈ ಹೆಂಗಸರು ಏನು ಮಾಡಿಯಾರು ಹೇಳಾಕ ಬರೂಹಾಂಗಿಲ್ಲಪಾ. ಅವಳೂ ಹಟಮಾರಿ, ಇವಳೂ ಹಟಮಾರಿ. ಸೋತು ನಡೆಯುವವಳು ಒಬ್ಬಳೂ ಇಲ್ಲ.

**ಸದಾಶಿವ :**

ಅದೂ ನಿಜವೆ. ಅಂತೂ ಅವರಿಬ್ಬರಿಗೂ ಹೊಂದಿಕೆಯಾಗುವ ಹಾಗೆ ಕಾಣುವದಿಲ್ಲ. ಒಂದು ಮನೆಯಲ್ಲಿ ಇವರಿಬ್ಬರೂ ಇರುವದು ಸಾಧ್ಯವೇ ಇಲ್ಲ ಅಂತ ಅನ್ನಿಸುತ್ತದೆ.

**ಮಲ್ಲಪ್ಪ :**

ನನ್ನ ಹೆಂಡತೀನೂ ಒಂದೊಂದು ಬಾರಿ ಹುಡುಗರ ಹಾಂಗs ಮಾಡುತಾಳ. ಸಣ್ಣಾಪುಟ್ಟಾ ಮಾತಿಗೂ ಅಭಾ೯ಟ ಮಾಡಿಬಿಟ್ಟು ಎಲ್ಲಾರಿಗೂ ಬ್ಯಾಸ ರಾಗುವ ಹಾಂಗ ಮಾಡುತಾಳ. ಏನು ಮಾಡೂದು ಹೇಳು.

**ಸದಾಶಿವ :**

ಹೌದು. ನಾನೂ ಒಂದೆರಡು ಬಾರಿ ನೋಡಿದ್ದೇನೆ. ಸರೋಜಾಗೆ ಒಹಳ

ಅವಮಾನವಾಗುವ ಹಾಗೆ ಮಾತಾಡುತ್ತಾಳೆ. ಸರೋಜಾ ಆದರೋ ಬಹಳ ಅಭಿಮಾನೀ ಸ್ವಭಾವದ ಹುಡುಗಿ. ಈ ಅವಮಾನ ಎಲ್ಲಾ ಸಹಿಸಿಕೊಂಡು ಇಷ್ಟು ದಿನ ಆದರೂ ಇಲ್ಲಿ ಹ್ಯಾಗಿದ್ದಳೋ ಅಂತ ಆಶ್ಚರ್ಯ ನನಗೆ.

**ಮಲ್ಲಪ್ಪ :**

ಪಾಪ, ಪರದೇಶಿ ಕೂಸು. ಇಲ್ಲಿರದೇ ಇನ್ನೆಲ್ಲಿ ಹೋಗಬೇಕು ಅದು?

**ಸದಾಶಿವ :**

ಇಲ್ಲಿಗೆ ಬರುವದಕ್ಕೇ ಒಪ್ಪಿರಲಿಲ್ಲ ಅವಳು. ಏನಾದರಾಗಲಿ, ಪಟ್ಟಣದಲ್ಲಿ ಇದ್ದುಬಿಡುತೇನೆ ಅಂತ ಹಟ ಹಿಡಿದಿದ್ದಳು. ಆದರೆ ನೌಕರಿ ಸಿಗಲಿಲ್ಲ. ಅವಳ ಹತ್ತರ ಇದ್ದ ಹಣವೂ ತೀರಿಹೋಗಿತ್ತು. ಅಲ್ಲಿದ್ದು ಏನು ಮಾಡುವವಳು ಅಂತ ನಾನೇ ಒತ್ತಾಯಮಾಡಿ ಇಲ್ಲಿಗೆ ಕಳಿಸಿಕೊಟ್ಟೆ.

**ಮಲ್ಲಪ್ಪ :**

ಅದೂ ಖರೇ. ನಾ ಹೋಗಿ ಕರೆದಾಗ ಬಂದಿರಲಿಲ್ಲ. ನೀನು ಕಳಿಸಿದಿ ಅಂತಲೇ ಬಂದಳು. ಇಲ್ಲಿ ನೋಡಿದರ ಹಿಂಗ ನಡೆದೈತಿ! ಪಾಪ. ಆ ಹುಡುಗಿಯ ಹಣೆಯೊಳಗ ಸುಖಾ ಬರದಂಗ ಕಾಣುವದಿಲ್ಲ.

[ಅಷ್ಟರಲ್ಲಿ ತಲೆಯ ಮೇಲೆ ಬುಟ್ಟಿ ಹೊತ್ತುಕೊಂಡು ಸರೋಜ ಬರುವಳು. ಅವಳು ಸೊರಗಿಹೋಗಿದ್ದಾಳೆ. ಸಾಧಾರಣ ಸೀರೆ – ತಲೆಗೂದಲು ಕೆದರಿದೆ. ಮುಖದಲ್ಲಿ ಉದಾಸೀನತೆ.]

**ಸದಾಶಿವ :**

ಅಂತೂ ಸಗಣಿ ಹೊರುವ ಕೆಲಸ ಕೂಡಾ ನಿನಗೆ ರೂಢಿಯಾಯಿತಲ್ಲಾ ಸರೋಜಾ?

**ಸರೋಜ :**

ಏನು ರೂಢಿಯೋ ಬಿಡಿರಿ. ಹೊಲಸು ವಾಸನೆ ತಡೆಯಲಿಕ್ಕಾಗುವದಿಲ್ಲ. ಮೈ ಕೈಯಲ್ಲಾ ನೋವು. ತಲೆಗೂದಲೆಲ್ಲಾ ಹೊಲಸು. ಸೋಪು ಹಚ್ಚಿ ತೊಳೆದರೂ ಉಪಯೋಗವಿಲ್ಲ. ಮತ್ತೆ ಸೆಗಣಿ ಹೊರಬೇಕು, ಮತ್ತೆ ಹೊಲಸೇ.

[ಅಷ್ಟರಲ್ಲಿ ಪೊರಕೆ ಹಿಡಿದುಕೊಂಡು ಪಾರ್ವತಿಯ ಆಗಮನ.]

## ಎರಡನೆಯ ಅಂಕ

**ಪಾರ್ವತಿ.**

ಏನೇ, ಸೆಗಣೀ ಒಗದು ಬಾ ಅಂದರ ಇಲ್ಲಿ ಹಾದ್ಯಾಗ ನಿಂತು ಹರಟೆ ಬಡೀತಿದ್ದೀಯೇನ?

**ಮಲ್ಲಪ್ಪ:**

ಇಲ್ಲಿಗೂ ಬಂದಿಯೇನ ನೀ! ಪಾಪ, ಬೆಳಗಿನಿಂದ ದುಡಿದು ದುಡಿದು ದಣಿದಿರಬೇಕು. ಸ್ವಲ್ಪ ಆರಾಮು ತಗೊಳ್ಳಲಿ ಬಿಡು.

**ಪಾರ್ವತಿ.**

(ವ್ಯಂಗ್ಯವಾಗಿ) ಹೂಂ. ದುಡಿದು ದುಡಿದು ಮುಸೀ ತುಂಬಿದಾಳ!

**ಸರೋಜ:**

ಇಂಥಾ ಕೆಲಸಮಾಡಿ ನನಗೆ ರೂಢಿಯಿಲ್ಲ. ತಲೆನೋವು ಸುರುವಾಗಿ ಹೋಗಿದೆ.

**ಪಾರ್ವತಿ:**

ನಿನಗ ಇನ್ನೆಂಥಾ ಕೆಲಸ ರೂಢಿಯಾಗ್ಬೇಕಿತ್ತ್ಯೋ ದೇವರಿಗೇ ಗೊತ್ತು.

**ಸರೋಜ.**

ನನ್ನ ಯಾಕ ಹರಿದುಕೊಂಡು ತಿನ್ನುತ್ತೀ ಅತ್ತಿಗೆ?

**ಪಾರ್ವತಿ:**

ಮತ್ತ ನಂದೇ ತಪ್ಪಾತೇನು? ಹೋಗು. ಗಡಾಗಡಾ ತಿಪ್ಪಿಗೆ ಹೋಗಿ ಒಗದು ಬಾ ಸೆಗಣಿ. ಸಂಜೆಯಾಗ್ತಾ ಬಂತು, ಒಲೀಗೆ ಉರಿ ಹಚ್ಚೋದು ಯಾವಾಗ?

[ ಸರೋಜ ನಿಧಾನವಾಗಿ ಹೋಗುವಳು. ]

**ಮಲ್ಲಪ್ಪ:**

ನೀ ಸ್ವಲ್ಪ ಅವಳನ್ನ ಸಮಾಧಾನದಿಂದ ನೋಡಿಕೋಬಾರದೇನೆ? ಅವಳನ್ನ ಯಾಕ ಕಾಡಿಸುತೀ?

**ಪಾರ್ವತಿ:**

(ಕೋಪದಿಂದ) ಕಾಡಿಸೂದಕ್ಕ ನಾನೇನ ದುರ್ಗವ್ವ ಏನು!

[ ಬಿರುಬಿರನೆ ಹೋಗುವಳು. ]

**ಮಲ್ಲಪ್ಪ.**

(ಹಣೆ ಬಡೆದುಕೊಳ್ಳುತ್ತಾ) ನಾನೇ ಎಲ್ಲಾದರೂ ಮನೆಬಿಟ್ಟು ಹೋಗಿಬಿಡುವ ಹಾಂಗ ಆಗ್ಯೆತಿ. ಬಾ. ಸದಾಶಿವಾ, ಇವತ್ತು ಇಲ್ಲೇ ವಸ್ತಿಮಾಡಿ ನಾಳೆ ಹೋದೀಯಂತೆ.

( ತೆರೆ )

## ದೃಶ್ಯ ಮೂರು

[ಮಲ್ಲಪ್ಪನ ಮನೆಯ ಪಡಸಾಲೆ. ಚಾಪೆಯ ಮೇಲೆ ಕುಳಿತು ಮಲ್ಲಪ್ಪ ಸದಾಶಿವ ಮಾತಾಡುತ್ತಿದ್ದಾರೆ. ಪಾರ್ವತಿ ಒಂದು ಕಡೆ ಅಕ್ಕಿ ಹಸನು ಮಾಡುತ್ತಾ ಕೂತಿದ್ದಾಳೆ. ಒಳಗೆ ಏನೋ ಒಡೆದ ಸಪ್ಪಳ ಕೇಳುವುದು.]

**ಪಾರ್ವತಿ.**

(ಮೊರವನ್ನು ದೊಪ್ಪನೆ ನೆಲಕ್ಕೆ ಒಡೆದು) ಕೇಳಿದಿರೇನು ಸಪ್ಪಳಾ?

**ಮಲ್ಲಪ್ಪ:**

ಯಾಕ? ಏನಾತು? ಸರೋಜ ಏನಾದರೂ ಒಡೆದಳೋ ಏನೋ.

**ಪಾರ್ವತಿ:**

ಇವಳ ಕೈಯಾಗ ಒಂದು ಗಡಿಗಿ ಒಂದು ದಿನಾ ಉಳಿದರ ಹೇಳ್ರಿ. ನಿನ್ನೇ ತಂದಿದ್ದಿನಿ ಹೊಸಾ ಗಡಿಗೀ ರಾಮಾಪುರದಿಂದ. ಅದನ್ನೂ ಒಡದು ಬಿಟ್ಟಂಗ ಕಾಣುತ್ತೈತಿ.

**ಮಲ್ಲಪ್ಪ:**

ಒಡದದ್ದು ಏನು ಅನ್ನೂದನ್ನ ನೆಟ್ಟಗ ತಿಳಕೊಳ್ಳದs ಇಲ್ಲೇ ಕುಂತು ಮಾತಾಡುತೀಯಲ್ಲ! ಸರೋಜಾ, ಏ ಸರೋಜಾ!

[ಸರೋಜ ಬರುವಳು.]

**ಮಲ್ಲಪ್ಪ:**

ಏನಾತೇ? ಏನದು ಸಪ್ಪಳ?

**ಸರೋಜ:**

ಏನಿಲ್ಲಣ್ಣಾ. ಕೈತಪ್ಪಿ ಗಡಿಗೆ ಕೆಳಗೆ ಬಿತ್ತು.

**ಪಾರ್ವತಿ :**

(ಕೈ ತಿಕ್ಕುತ್ತಾ) ಹೂಂ! ಕೈತಪ್ಪಿ ಬಿತ್ತು! ಮತ್ತೇನ ಕಾಲು ತಪ್ಪಿ ಬೀಳುತೈತೇನ? ನಿನ್ನ ತಲೀ ತಪ್ಪಿ ಬೀಳುತೈತಿ, ತಲೀ.

**ಸರೋಜ.**

ಏನು ದೊಡ್ಡ ಮುತ್ತು ರತ್ನ ಒಡೆದ ಹಾಗೆ ಮಾಡುತೀಯಲ್ಲ. ಎರಡಾಣೆಯ ಗಡಿಗೆ ಒಡೆದರೆ ಏನು ಮುಗಿಲು ಕಳಚಿ ಬಿತ್ತೇನು?

**ಪಾರ್ವತಿ :**

ಎರಡಾಣೆ ಅಂದರ ನಿನಗ ಏನೋ ಅಂತ ಅನಿಸುತೈತೇನ? ಆ ಎರಡಾಣೇನ್ನ ದುಡೀಬೇಕಾದರ ನಮ್ಮ ಜೆನ್ನು ಬಾಗಿ ಹೋಗುತೈತಿ.

**ಸರೋಜ :**

ಬಲೆ! ಬಲೆ! ನೋಡಿದ್ದೇನೆ ಬಿಡು!

**ಪಾರ್ವತಿ.**

ತಪ್ಪ ಮಾಡೂದು, ಮತ್ತ ನನಗ ತಿರುಗಿ ವಾದಿಸೂದು.

**ಮಲ್ಲಪ್ಪ :**

ಹೋಗಲಿ ಬಿಡೇ. ನೀನಾದರೂ ಯಾಕ ಮಾತು ಬೆಳಸುತೀ? ಮಣ್ಣಿನ ಗಡಿಗಿಯೊಳಗೆ ಅಡಿಗೀಮಾಡಿ ರೂಢಿಯಿಲ್ಲ ಅವಳಿಗೆ. ಏನೋ ಅಪ್ಪಿ ತಪ್ಪಿ ಒಡೀತಾವ.

**ಸದಾಶಿವ.**

ಹೌದು. ಹಾಗೆ ಆಗುವದೂ ಸಹಜ.

**ಪಾರ್ವತಿ :**

ನೀವಿಬ್ಬರೂ ಅವಳನ್ನ ಎತ್ತಿ ಹಿಡಿದು ಮಾತಾಡಹತ್ತಿದಿರಿ. ನಾನು ಕೆಟ್ಟವ ಳಾದಿನಿ. ಬೆಳ್ಳಿ ಬಂಗಾರದ ಪಾತೇಲಿಯಲ್ಲಿ ಅಡಿಗೀಮಾಡಿ ಸಕ್ಕರೀ ತುಪ್ಪಾ ತಿಂದವಳು ಇವಳು!

**ಸದಾಶಿವ :**

(ಚೇಷ್ಟೆಯಿಂದ) ಸಕ್ಕರೆ, ತುಪ್ಪ, ಸಣ್ಣಕ್ಕಿ ಅನ್ನ. ಚಪಾತಿ ಎಲ್ಲಾ ತಿಂದವಳು....

**ಪಾರ್ವತಿ :**

(ಅಣಕಿಸುತ್ತ) ಸಣ್ಣಕ್ಕಿ ಅನ್ನ! ಅದನ್ನುಂಡು ಉಂಡs ಹಿಂಗಾಗಿರಬೇಕು ಅರಳೀಗೊಂಬಿಯು ಹಂಗ! ಗಿರಣ್ಯಾಗ ಒಡದದ್ದು. ಅದರಾಗೇನ ಶಕ್ತಿ ಇರುತೈತ್ಯೋ ಏನಿರುತೈತಿ! ಅದರ ಸಂಗಡ ಆ ಚಾದ ನೀರು ಬ್ಯಾರೆ, ಮೈ ಒಣಗಿಸೂದಕ್ಕ.

**ಸದಾಶಿವ :**

ಈಗೇನು, ಹಳ್ಳಿಯವರೂ ದಿನ ಬೆಳಗಾದರೆ ಕೊಡಕೊಡ ಚಹ ಕುಡೀತಾರಲ್ಲ ಪಾರ್ವತಕ್ಕಾ!

**ಪಾರ್ವತಿ :**

ಕುಡೀತಾರ ಬುದ್ಧಿಯಿಲ್ಲದ ಮುಕ್ಕಗಳು. ನಾನಂತೂ ಎಂದೂ ಮುಟ್ಟಿಲ್ಲಪಾ ಆ ಚಾನ್ನ.

**ಸದಾಶಿವ :**

ನಾನೂ ಅಷ್ಟೇ. ಚಹಾ ಕಾಫಿ ಯಾವದನ್ನೂ ಕುಡಿಯುವದಿಲ್ಲ.

**ಮಲ್ಲಪ್ಪ :**

ಮತ್ತೇನು ಕುಡೀತೀ?

**ಸದಾಶಿವ :**

ಮನೆಯೊಳಗೆ ಹಾಲಿಗೇನು ಕೊರತೆ.

**ಪಾರ್ವತಿ :**

ಬಾಳ ಚಲೋದು ಸದಾಶಿವಣ್ಣಾ. ಹಾಲು ಕುಡಿಯೂದು ಬಾಳ ಚಲೋದು. ಚಾ ಕಾಫಿ ಎಂದೆಂದೂ ಮುಟ್ಟಬ್ಯಾಡಪಾ.

**ಸರೋಜ :**

ಚಾ ಕಾಫಿ ಚಟ ಇರುವ ಹೆಂಡತಿ ಬಂದರೆ?

**ಸದಾಶಿವ :**

ಅವಳೂ ಹಾಲಿನ ಚಟ ಹಚ್ಚಿಕೊಳ್ಳಬೇಕಾಗುವದು.

**ಸರೋಜ.**

ಒಳ್ಳೇ ಮಾತೇ ನಿಮ್ಮದೂ. ಹೆಂಡತಿಯಾದವಳಿಗೆ ಒಂದು ಕಪ್ ಚಾ ಕೂಡಾ ಇಲ್ಲದಿದ್ದರೆ!

**ಸದಾಶಿವ.**

ಇಲ್ಲದಿದ್ದರೇನು ಪ್ರಪಂಚವೇ ಮುಳುಗಿ ಹೋಗುವದೇನು? ಒಂದೆರಡು ದಿನ ಹೋದರೆ ತಾನಾಗಿಯೇ ಚಟ ಬಿಡುತ್ತಾಳೆ.

**ಸರೋಜ.**

ಅಂಥಲ್ಲಿ ಬಂದು ಯಾವಳು ಸುಖವಾಗಿದ್ದಾಳೊ!

**ಪಾರ್ವತಿ:**

ಮತ್ತ ಸುರುಮಾಡಿದಳು ಪಟ್ಟಣದಾಗ ಕಲಿತ ಮಾತನ್ನು!

**ಸದಾಶಿವ:**

ಸುಖವಾಗಿರದೇನು ಸರೋಜಾ. ಎರಡು ಹೊತ್ತು ಅಡಿಗೆಮಾಡಿ, ಮನೆ ಕೆಲಸ ನೋಡಿಕೊಂಡಿದ್ದರೆ ಸಾಕು. ಹೆಚ್ಚಿಗೇನೂ ಬೇಕಾಗಿಲ್ಲ.

**ಮಲ್ಲಪ್ಪ:**

ಸೆಗಣಿ ಹೊರುವವರ್ಯಾರಪ್ಪಾ?

**ಸದಾಶಿವ:**

ಮನೆಯ ಕೆಲಸ ಅಂದರೆ ಅದೂ ಬಂದಿತಲ್ಲ ಮಲ್ಲಣ್ಣಾ!

**ಮಲ್ಲಪ್ಪ:**

ಬಾವಿಯಿಂದ ನೀರು ಹೊತ್ತುಕೊಂಡು ಬರೂದು?

**ಸದಾಶಿವ:**

ಅದೂ ಕೂಡಾ.

**ಮಲ್ಲಪ್ಪ:**

ದನಕ್ಕೆ ಮೇವು?

**ಸದಾಶಿವ:**

ಅದೂ ಕೂಡಾ.

**ಸರೋಜ :**

ಎರಡು ಆಳಿನ ಕೆಲಸವನ್ನೆಲ್ಲಾ ಒಬ್ಬ ಹೆಂಡತಿಯ ಕೈಯಿಂದ ಮಾಡಿಸಿ ಕೊಳ್ಳುವ ವಿಚಾರವೇನು ನಿಮ್ಮದು ?

**ಪಾರ್ವತಿ :**

ಮತ್ತೇನು. ಆವ ಇಬ್ಬರು ಹೆಂಡರನ್ನು ಮಾಡಿಕೋಬೇಕು ಅಂತೀಯೇನು ? ರೈತನ ಹೆಂಡತಿ ಅಂದಮ್ಯಾಲ ಮೈಮುರಿದು ದುಡೀಬೇಕಾಗುತೈತಿ. ಈಗ ನಾ ದುಡಿಯೂದಿಲ್ಲೇನ ?

**ಮಲ್ಲಪ್ಪ :**

ಕತ್ತಲಾಗ್ತಾ ಬಂತು. ಲಾಟೀನು ಹಚ್ಚು ಸರೋಜಾ.

[ಅವಳು ಒಳಗಿನಿಂದ ಲಾಟೀನು ತಂದು, ಗ್ಲಾಸು ಒರೆಸಲು ತೆಗೆಯುವಳು. ಅದು ಕೆಳಗೆ ಬಿದ್ದು ಒಡೆದುಹೋಗುವುದು.]

**ಪಾರ್ವತಿ :**

ನಿನ್ನ ಮೈಯಾಗ ದುರ್ಗವ್ವ ಹೊಕ್ಕಂಗ ಕಾಣುತೈತಿ, ನೀ ಮುಟ್ಟಿದ್ದೆಲ್ಲಾ ಒಡದು ಹೋಗುತೈತಲ್ಲ ? ಇದು ಈಗ ಗಡಿಗೀ ಒಡದಿ, ಈಗ ಗ್ಲಾಸ ಒಡದಿ. ನಮ್ಮ ಮನೀನು ಒಡೀಲಿಕ್ಕೆ ಬಂದಾಂಗ ಕಾಣುತೈತಿ ನೀ !

**ಸರೋಜ :**

(ಅಸಹನೆಯಿಂದ) ನಿನಗೆ ನಾನು ಬೇಡವಾಗಿದ್ದರೆ ಹಾಗೆ ಹೇಳಿಬಿಡು. ನಿನ್ನ ಮನೆಬಿಟ್ಟು ಎಲ್ಲಾದರೂ ಹಾಳಾಗಿ ಹೋಗಿಬಿಡುತ್ತೇನೆ. ಏನೋ ಕೈತಪ್ಪಿ ಗ್ಲಾಸು ಬಿತ್ತು, ಒಡೆಯಿತು. ಏನು ದೊಡ್ಡದೋ, ಗ್ಲಾಸ್ ಅಂದರೆ !

**ಪಾರ್ವತಿ :**

ಏನು ದೊಡ್ಡದು ! ನಿನಗ ಯಾವದೂ ದೊಡ್ಡದಲ್ಲ. ನಿನ್ನ ಮುಂದ ಯಾವದು ದೊಡ್ಡದಾದೀತು ?

**ಸರೋಜ :**

ಬಿಡು ಬಿಡು. ಹೋದರೆ ಹೋಯಿತು. ಮತ್ತೊಂದು ಕೊಂಡುಕೊಡು ತೇನೆ.

**ಪಾರ್ವತಿ :**

(ಕೋಪದಿಂದ) ಹಾ! ಹಾ! ಕೊಂಡುಕೊಡೂದಕ್ಕ ಹೊಂಟಿಯೇನ? ನೀ ಬಂದಾಗಿಂದ ಕೊಂಡುಕೊಟ್ಟೀ ನಮ್ಮ ಸಂಸಾರ ನಡಸ್ತಾ ಇದ್ದೀಯೇನ? ಲಾಟನ ಗ್ಲಾಸ ತರೂದಕ್ಕ ನಮ್ಮ ಹತ್ತರ ರೊಕ್ಕ ಇಲ್ಲಂತ ತಿಳಿದಿದ್ದೀಯೇನ? ಏನೋ ಸಾವಿರಾರು ರೂಪಾಯಿ ಗಂಟು ಮಾಡಿಕೊಂಡವಳ ಹಾಂಗ ಮಾತಾಡ್ತೀಯಲ್ಲೇ? ತಪ್ಪಾತನ್ನು....

[ಸರೋಜ ಮುಸಿಸಿಸಿಂದ ಪಾರ್ವತಿಯನ್ನು ಮುರುಮುರನೆ ನೋಡುವಳು.]

**ಪಾರ್ವತಿ :**

ಏನೇ, ಹಂಗ್ಯಾಕ ನೋಡ್ತೀ ನನ್ನ, ನುಂಗಿಬಿಡುವ ಹಾಂಗ?

**ಮಲ್ಲಪ್ಪ :**

ಹೋಗಲಿ ಬಿಡಾಕಽ! ನಿಂದಾದರೂ ಎಷ್ಟು ಸಿಟ್ಟು!

**ಪಾರ್ವತಿ :**

ನೋಡಿರಲ್ಲಾ ನೀವಽ, ನನ್ನ ಹೆಂಗ ನೋಡಾಕ ಹತ್ತಿದಾಳ!

**ಮಲ್ಲಪ್ಪ :**

ಮತ್ತೆ ನಿನ್ನ ಪಾಂಡತನಾ ಸುರುಮಾಡಿದಿ. ಈ ಮಾತು ಸಾಕು. ಬಿಟ್ಟು ಬಿಡು.

**ಪಾರ್ವತಿ :**

ನನ್ನ ಕೆಕ್ಕರಿಸಿ ನೋಡೂದು ಬಿಟ್ಟು ತಪ್ಪಾತು ಅಂತಾಳೇನ ಕೇಳ್ರಿ.

**ಮಲ್ಲಪ್ಪ :**

ಇದೇ ಈಗ ಅಂದಳಲ್ಲಽ!

**ಪಾರ್ವತಿ :**

ಏನಂತಾಳ? ಮತ್ತೆ ನನ್ನಽ ಹಂಗಿಸಿದಳು.

**ಮಲ್ಲಪ್ಪ :**

ಏನೋ ಕೈತಪ್ಪಿತು ಬಿಡು ಅಂದಳಲ್ಲಽ!

**ಪಾರ್ವತಿ :**

ಹೂಂ. ಅಂದಳು. ದೊಡ್ಡ ಉಪಕಾರ ಮಾಡಿವಳು ನನ್ನಮ್ಯಾಲ.

**ಸರೋಜ :**

(ಭಯಂಕರ ರೇಗಿ) ಇನ್ನೇನು ನಿನ್ನ ಕಾಲಿಗೆ ಬಿದ್ದು ತಾಯಿ ಕ್ಷಮಾ ಮಾಡು ಅಂತಾ ಸೆರಗೊಡ್ಡಿ ಬೇಡಿಕೋಬೇಕೇನು ?

**ಪಾರ್ವತಿ :**

ತಪ್ಪುಮಾಡಿದ ಮ್ಯಾಲ ಗಲ್ಲಾ ಗಲ್ಲಾ ಬಡಕೊಳ್ಳಾಕ ಕೂಡಾ ತಯಾರಾಗ ಬೇಕು.

**ಸರೋಜ :**

ಹುಟ್ಟಿದಂದಿನಿಂದ ಇದುವರೆಗೆ ಯಾರನ್ನೂ ಕ್ಷಮೆ ಕೇಳಿದವಳಲ್ಲ ನಾನು.

**ಪಾರ್ವತಿ :**

ಹೂಂ. ನೀನ್ಯಾಕಿ ಕೇಳೀ! ದೊಡ್ಡ ದೊರೆಸಾನಿಯಾಗಿ ಹುಟ್ಟಿದಾರೆ!

**ಸರೋಜ :**

ಅವನ್ನೆಲ್ಲಾ ತೆಗೆದುಕೊಂಡು ನೀನೇನು ಮಾಡುತೀ ?

**ಪಾರ್ವತಿ :**

ಪಟ್ಟಣದ ಮಂದೀದೆಲ್ಲಾ ಇಂಥಾ ಒಣ ದಿಮಾಕs....ಮನಿಯಾಗ ತಿನ್ನಾಕ ಜೋಳ ಇಲ್ಲದಿದ್ರೂ ಮೂಗು ಮ್ಯಾಲ ಮಾಡಿಕೊಂಡು ಮೆರೆಯುವವರು ನೀವು. ನಿಮ್ಮಂಥವರಿಗೆ ಅಂಜಿಕಿ ಗಿಂಜಿಕಿ ಎಲ್ಲಿಂದಾ ಬಂದೀತು ಹೇಳು. ಒಂದೆರಡು ಕಪಾಳಿಗೆ ಕೊಟ್ಟು ಕೆಲಸ ಮಾಡಿಸಿಕೊಂಡರ ತಿಳೀತೈತಿ ಆವಾಗ. ಆ ಮ್ಯಾಲ ಗ್ಲಾಸಾಗಲಿ ಗಡಿಗಿ ಆಗಲಿ ಕೆಳಗ ಬಿದ್ದರ ಹೇಳು.

**ಸರೋಜ :**

ಏನು, ನಾನು ಬಂದಾಗಿನಿಂದ ಸಾವಿರಾರು ಗ್ಲಾಸು ಒಡೆದ ಹಾಗೆ ಮಾತಾಡು ತೀಯಲ್ಲೇ ?

**ಪಾರ್ವತಿ :**

ಒಂದು ಒಡೆದರೇನ, ಸಾವಿರ ಒಡೆದರೇನ! ನಿನ್ನ ಮಾರೀ ನೋಡಿದರ

ಗೊತ್ತಾಗುವದಿಲ್ಲೇನ? ನಿನ್ನಿಂದ ಒಂದೂ ಕೆಲಸ ಆಗುವ ಹಾಂಗಿಲ್ಲ. ನುಮ್ಮನಃ ತಿಂದು ಮೈ ಬೆಳೆಸಿದ್ದೀ. ಪಟ್ಟಣದವರೆಲ್ಲಾ ಹಂಗಃ!

**ಸರೋಜ**:

ಎಂಟಾಣೆಯ ಗ್ಲಾಸಿಗಾಗಿ ಪಟ್ಟಣದವರನ್ನೆಲ್ಲಾ ಬಯ್ಯುತ್ತೀಯಲ್ಲೀ?

(ಕೊರಳು ಕೊಂಕಿಸಿ ಮುಖವನ್ನತ್ತ ತಿರುಗಿಸುವಳು.)

**ಮಲ್ಲಪ್ಪ**:

(ಹಣೆ ಚಚ್ಚಿಕೊಳ್ಳುತ್ತಾ) ಏ, ನೀವಿಬ್ಬರೂ ಬಾಯಿ ಹೊಲಿದುಕೊಂಡು ಸುಮ್ಮ ನಾಗ್ತೀರೋ ಇಲ್ಲೋ?

**ಪಾರ್ವತಿ**:

(ಪಿಸುಗುಡುತ್ತ) ಮೊದಲು ಅವಳಿಗೆ ಹೇಳಬಾರದೇನು? ನೆಟ್ಟಗೆ ಒಂದೂ ಕೆಲಸ ಮಾಡೂದಕ್ಕ ಬರೂದಿಲ್ಲಾ. ಮತ್ತ ನನಗಃ ತಿರುಗಿ ವಾದಿಸ್ತಾಳ.

**ಸರೋಜ**:

ನೀನು ಮಾಡುವ ಕೆಲಸ ನನಗೆ ಗೊತ್ತಾಗದಿರಬಹುದು. ಆದರೆ, ನಿನಗೂ ಒಂದೆರಡು ಸಂಗತಿ ನಾನು ಕಲಿಸಿಕೊಡಬಲ್ಲೆ.

**ಪಾರ್ವತಿ**:

ಏನೇ ನೀ ನನಗ ಕಲಿಸೂದು?

**ಸರೋಜ**:

ರೀತಿ, ನೀತಿ, ವಿನಯ, ದಯ.

**ಪಾರ್ವತಿ**:

ಹೂಂ. ನೀ ನನಗ ನೀತೀ ಕಲಿಸೂದಕ್ಕ ಬಾ. ಪಟ್ಟಣದಾಗ ದಿಕ್ಕಿಲ್ಲದ್ದಕ್ಕ ನನ್ನ ಮನೀಗೆ ಬಂದು ಕೂಳು ತಿಂತಾ ಬಿದ್ದಾಕಿ ನೀ ನನಗ ರೀತೀ ಕಲಿಸೂತೀಯೇನ? ನಿನ್ನಂಥಾ ಗತಿಗೇಡಿಯಿಂದ ಸಿಕ್ಕಸಿಕ್ಕ ಮಾತು ಆಡಿಸಿಕೊಳ್ಳುವದು ನನ್ನ ಹಣ್ಯಾಗ ಬರದೈತಿ! ಅಯ್ಯೋ ದೇವರೆ! (ಅಳುವಳು)

**ಮಲ್ಲಪ್ಪ**:

ಇಲ್ಲೀತನಕ ಅವಳನ್ನಃ ಬೈದು ಈಗ ಮತ್ತೆ ನೀನಃ ಅಳಾಕ ಹತ್ತಿಯಲ್ಲ! ಏನೇನ ನೋಗಾ ಹಾಕ್ತೀಯೋ?

**ಪಾರ್ವತಿ:**

ಹೂಂ. ನಾನೇ ನೋಗು ಹಾಕುವಾಕಿ! ನನಗಿಂತ ಇವಳೇ ಹೆಚ್ಚಿನಾಕಿ ಆದಳಲ್ಲ ನಿಮಗೂ! ಇಷ್ಟು ವರ್ಷ ಈ ಮನಿಗಾಗಿ ದುಡದು ದುಡದು ಹಣ್ಣಾದ ನನ್ನ ಕಿಮ್ಮತ್ತು ಇಲ್ಲ ನಿಮಗ. ನಿನ್ನೆ ಮೊನ್ನೆ ಬಂದಾಕಿಯದೇ ಹೆಚ್ಚಾತು. ನಾನಂ ಹೋಗ್ತೀನಿ ಈ ಮನಿ ಬಿಟ್ಟು. ಅಣ್ಣಾ ತಂಗಿ ಇಬ್ಬರೂ ಆರಾಮ ಇರ್ರಿ (ಅವಸರದಿಂದ ಒಳಗಡೆ ಹೋಗುವಳು. ಮಲ್ಲಪ್ಪನೂ ಎದ್ದು ಅವಳನ್ನು ಹಿಂಬಾಲಿಸುವನು.)

**ಸದಾಶಿವ:**

ಆಗಬಾರದ್ದೆಲ್ಲಾ ಆಗುತ್ತಾ ಇದೆ. ಏನು ಮಾಡುವದು? ನಿನಗೂ ಪಾರ್ವತಮ್ಮನಿಗೂ ಕೂಡಿ ನಡೆಯುವುದು ಶಕ್ಯವೇ ಇಲ್ಲ ಸರೋಜಾ.

**ಸರೋಜ.**

ಇಂಥಾ ರಾಕ್ಷಸಿಯೊಂದಿಗೆ ಹ್ಯಾಗೆ ಕೂಡಿ ನಡೆದೀತು?

**ಸದಾಶಿವ.**

ನೀನೂ ಅವಳಿಗೆ ಎದುರು ಮಾತಾಡಬಾರದು. ಅವಳೊಂದು ಮಾತು ಹೆಚ್ಚು ಕಡಿಮೆ ಅಂದರೂ ಸೈರಿಸಿಕೋಬೇಕು.

**ಸರೋಜ.**

ಸೈರಿಸಿಕೊಂಡು ಸೈರಿಸಿಕೊಂಡು ಸಾಕಾಗಿ ಹೋಯಿತು ಸದಾಶಿವ. ನಾನಿನ್ನು ಈ ಮನೆ ಬಿಟ್ಟು ಹೊರಡದೆ ಗತಿಯಿಲ್ಲ.

**ಸದಾಶಿವ.**

ಎಲ್ಲಿಗೆ ಹೋಗುವಾಕೆ ಸರೋಜಾ?

**ಸರೋಜ:**

ಎಲ್ಲಿಗೆ ಹೋಗುವಾಕೆ? ಎಲ್ಲಿಗೆ ಹೋಗುವಾಕೆ? ನನಗೊಂದೂ ತಿಳಿಯದಂತಾಗಿದೆ ಸದಾಶಿವ. ಕೆಲಸ ಸಿಕ್ಕ ಕೂಡಲೆ ತಿಳಿಸುತ್ತೇನೆ ಅಂತ ಚಂಪಾವತಿ ಹೇಳಿದ್ದಳು. ಇನ್ನೂ ಏನೂ ಸಿಕ್ಕಲಿಲ್ಲ. ಸಿಕ್ಕಿದ್ದರೆ ಈ ನರಕದಲ್ಲಿರುವ ಪ್ರಸಂಗ ಬರುತ್ತಿರಲಿಲ್ಲ. (ಅವಳ ಕಣ್ಣುಗಳಲ್ಲಿ ನೀರು ತುಂಬುವುದು) ಈಗ

ಎಲ್ಲಾದರೂ ಕೆರೆ ಬಾವಿ ನೋಡಿಕೊಂಡು ಪ್ರಾಣ ಬಿಡಬೇಕಾದ ಪ್ರಸಂಗ ಬಂತು.

**ಸದಾಶಿವ**:

(ಸಂತೈಸುವ ಸ್ವರದಿಂದ) ಛೀ ಹುಚ್ಚಿ! ಪ್ರಾಣ ಯಾಕೆ ಬಿಡಬೇಕು? ಅಂಥಾ ಪ್ರಸಂಗ ಏನು ಬಂದಿದೆ ಈಗ? ಕ್ಷುಲ್ಲಕ ವಿಷಯಗಳನ್ನೆಲ್ಲಾ ದೊಡ್ಡದು ಮಾಡಿ ವ್ಯರ್ಥವಾಗಿ ತಲೆ ಕೆಡಿಸಿಕೊಳ್ಳಬಾರದು.

**ಸರೋಜ**:

ಅವಳದೇ ಎಲ್ಲಾ ಗದ್ದಲ. ಅವಳ ಒಂದೊಂದು ಮಾತು ಸೂಜಿಯಿಂದಿರಿದ ಹಾಗಾಗುತ್ತದೆ. ಇವಳ ಕೈಯೊಳಗೆ ನಾನೊಂದು ದಿನ ಪ್ರಾಣಾ ಬಿಡಲೇ ಬೇಕಾಗಿ ಬಂದೀತು.

**ಸದಾಶಿವ**:

ಇನ್ನೊಂದು ನಾಲ್ಕು ದಿನಾ ಸಮಾಧಾನ ಮಾಡಿಕೋ ಸರೋಜಾ. ಮುಂದೆ ಏನಾದರೂ ದಾರಿ ಕಾಣಿಸೀತು. ಹೂಂ. ಕಣ್ಣೊಳಗಿನ ನೀರು ಒರಸಿಕೋ ನೋಡಲು. (ಸರೋಜ ಕಂಬನಿ ಮಿಡಿಮುಕೊಳ್ಳುವಳು) ಸ್ವಲ್ಪ ಗೌಡರಲ್ಲಿಗೆ ಹೋಗುವದಿತ್ತು. ಹೋಗಿ ಈಗ ಬಂದು ಬಿಡುತೇನೆ.

(ಸದಾಶಿವ ಹೋಗುವನು)

**ಸರೋಜ**:

(ಗೋಡೆಯ ಮೇಲಿನ ಗಾಂಧೀಪಟವೆದುರಿಗೆ ನಿಂತು)

– ಗೀತೆ –

**ಶ್ರೀ ಗುರುವೇ, ಬಾಪೂ, ಹರಸು ಬಾ!**
**ಪರದೇಶಿಯು ನಾ, ಶರಣು ಬಂದೆನ್ನೈ!**
**ದುರಿತಸಮಯವಿದು ಬಂದೆರಗಿಹುದೈ!**
**ತರಳೆ ನಾ, ತೋರಿಸೈ ದಾರಿಯಾ!**

(ಹಾಡು ಮುಗಿಯುವ ಹೊತ್ತಿಗೆ ಒಳಗಿನಿಂದ ಮಲ್ಲಪ್ಪ ಬರುವನು. ತಂಗಿಯ ತಲೆ ನೇವರಿಸುತ್ತಾ)

**ಮಲ್ಲಪ್ಪ :**
ನೀನೇನು ದುಃಖಾ ಮಾಡಿಕೋಬ್ಯಾಡ ಸರೋಜಾ.
(ಸರೋಜ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳುವಳು)

**ಮಲ್ಲಪ್ಪ :**
ಪಾರ್ವತಿ ಬಹಳ ಹಟಮಾರಿ. ನಾನಾದರೂ ಏನು ಮಾಡಲಿ ಹೇಳು.

**ಸರೋಜ :**
ನಾನೆಲ್ಲಾದರೂ ಹೋಗಿ ಬಿಡುತೇನೆ ಮಲ್ಲಣ್ಣ.

**ಮಲ್ಲಪ್ಪ :**
ಹುಚ್ಚೀ! ನೀನೆಲ್ಲಿ ಹೋಗುತೀ?

**ಸರೋಜ :**
ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೇ ಮಲ್ಲಣ್ಣಾ? ಎಲ್ಲಿಯಾದರೂ ಕೂಲಿ ಮಾಡಿ ತಿಂದೇನು, ಇಲ್ಲಿರುವದಿಲ್ಲ.

**ಮಲ್ಲಪ್ಪ :**
(ನಗುತ್ತಾ) ಕೂಲಿ ಮಾಡುವದಕ್ಕೂ ತಾಕತ್ತು ಬೇಕು ಸರೋಜಾ.

**ಸರೋಜ :**
(ಗಾಂಭೀರ್ಯದಿಂದ) ಇಷ್ಟು ದಿನ ನನಗೆ ತಿಳಿಯಲಿಲ್ಲ. ಇನ್ನು ಮೇಲೆ ನಾನೂ ನಿನ್ನ ಹೆಂಡತಿಯ ಹಾಗೇ ದುಡಿಯಲು ಕಲೀತೇನೆ.

**ಮಲ್ಲಪ್ಪ :**
ಅವಳಂಗ ದುಡಿಯೂದಾದರ ನೀನ್ಯಾಕ ಮನೀಬಿಟ್ಟು ಹೋಗಬೇಕಽ?

**ಸರೋಜ :**
ಅವಳಿಂದ ಅನ್ನಿಸಿಕೊಳ್ಳುವದೂ ಬೇಡಾ, ಅವಳ ಮನೆಯಲ್ಲಿರುವದೂ ಬೇಡಾ. ನಾನೆಂದರೆ ಅವಳಿಗಾಗುವದಿಲ್ಲ.

**ಮಲ್ಲಪ್ಪ :**
ನೀನು ಪಟ್ಟಣದಾಗ ಬೆಳೆದಾಕಿ ಅವಳನ್ನ ಕಡಿಮೆಯವಳ ಹಾಂಗ ಕಾಣುತೀ ಅಂತ ಅವಳು ತಿಳಿದುಕೊಂಡಿದಾಳ. ಅದಕ್ಕೇ ನಿನ್ನ ಮಾತು ನಿನ್ನ ರೀತಿ

ನಡತೆ ಅವಳಿಗೆ ಸರಿಬರುವದಿಲ್ಲ. ನಿಮ್ಮ ಸಂಗಡ ಇರುವಾಗ ನೀನೂ ನಮ್ಮ ಹಾಂಗs ಇರಬೇಕು ಸರೋಜಾ.

**ಸರೋಜ** :

ಹಾಗಿರಬೇಕು ಅಂತ ನಾನೂ ಯತ್ನಿಸುತ್ತಿದ್ದೇನೆ ಮಲ್ಲಿಣ್ಣಾ. ಆದರೆ ಪಾರ್ವತಿಗೆ ಮಾತ್ರ ಯಾವಾಗಲೂ ಅಸಮಾಧಾನ.

**ಮಲ್ಲಪ್ಪ** :

ನೀ ಸ್ವಲ್ಪ ಯಾಕ ಬಾಗಿಕೊಂಡು ಹೋಗಬಾರದು? ನಾ ಅವಳ ಕಡೆ ಮಾತಾಡುತೀನಂತ ತಿಳಕೋಬ್ಯಾಡ. ನಿನಗ ಹಳ್ಳಿ ಅಂದರ ಆಗುವ ಹಾಂಗಿಲ್ಲ. ಹಳ್ಳೀ ಮಂದಿ ಅಂದರ ಆಗುವ ಹಾಂಗಿಲ್ಲ. ಅವಳಿಗೆ ಪಟ್ಟಣ, ಪಟ್ಟಣದ ಮಂದಿ ಅಂದರ ಆಗುವ ಹಾಂಗಿಲ್ಲ. ನೀವಿಬ್ಬರೂ ತಪ್ಪು ಮಾಡು ತೀರಿ.

**ಸರೋಜ** :

ಆಯಿತಲ್ಲ ಮಲ್ಲಣ್ಣ. ನಾನು ಮಾಡುವದು ತಪ್ಪು ಅಂತ ನಿನಗೂ ಅನಿಸಿದ ಮೇಲೆ ನಾನಿಲ್ಲಿದ್ದು ಉಪಯೋಗವಿಲ್ಲ. ನಿನಗೂ ಬೇಡವಾಗಿ ನಾನೇಕೆ ಇಲ್ಲಿರಲಿ? ಮತ್ತೆ ಪಟ್ಟಣಕ್ಕೇ ಹೋಗಿಬಿಡುತ್ತೇನೆ.

**ಮಲ್ಲಪ್ಪ** .

ನೋಡಿದಿಯಾ! ಹೀಂಗ ಮೂಗಿನಮ್ಯಾಲ ಸಿಟ್ಟು ಇಟ್ಟುಕೊಂಡುಬಿಟ್ಟರ ಹೆಂಗ ನಡೀಬೇಕು? ನೀ ಹೋಗು ಅಂದೆನೇನು ನಾ?

**ಸರೋಜ** .

ನಾನೇನು ಮಾಡಲಿ ಅನ್ನುವದನ್ನಾದರೂ ಹೇಳು.

**ಮಲ್ಲಪ್ಪ** :

ನೋಡವ್ವಾ. ಅವಳು ಏನೇ ಅಂದರೂ ಕಿವೀಮ್ಯಾಲ ಹಾಕ್ಕೊಳ್ಳಬ್ಯಾಡ.

**ಸರೋಜ**

ಆಯಿತು. ಹಾಗೇ ಮಾಡುತ್ತೇನೆ.

**ಮಲ್ಲಪ್ಪ.**

ಇದೇ ಈಗ ನೀನಂದ ಮಾತಿನಿಂದ ಅವಳಿಗೆ ಬಹಾಳ ಸಿಟ್ಟು ಬಂದೈತಿ. ಈಗ ನೀನು ಅವಳಿಗೆ ತಪ್ಪಾತು ಅಂತ ಹೇಳಿಕೊಳ್ಳಬೇಕಂತೆ.

**ಸರೋಜ:**

ಅವಳಿಗೆ ತಪ್ಪಾತು ಅನ್ನಲಿಕ್ಕೆ ನಾನು ಮಾಡಿರುವ ಅಪರಾಧವಾದರೂ ಏನು ಮಲ್ಲಣ್ಣಾ? ಅವಳೇ ಸುಮ್ಮಸುಮ್ಮನೆ ಮಾತಿಗೆ ಮಾತು ಬೆಳಸಿ ನನ್ನನ್ನು ಸಿಟ್ಟಿಗೆಬ್ಬಿಸಿದಳು.

**ಮಲ್ಲಪ್ಪ:**

ಅವಳು ಯಾವಾಗಲೂ ಹಾಂಗೇ ಸರೋಜಾ. ಭಯಂಕರ ಹಟಮಾರಿ. ನೀನು ಅವಳ ಕಾಲು ಹಿಡಿದು ಬೇಡಿಕೊಳ್ಳುವ ತನಕಾ ಅವಳು ಮಾತಾಡುವದೇ ಇಲ್ಲಂತೆ ನಿನ್ನ ಸಂಗಡ.

**ಸರೋಜ:**

ಮಾತಾಡದಿದ್ದರೆ ಬಿಡಲಿ. ಅವಳು ಮಾತಾಡಿದರೆಷ್ಟೋ, ಬಿಟ್ಟರೆಷ್ಟೋ!

**ಮಲ್ಲಪ್ಪ:**

(ದೈನ್ಯದಿಂದ) ನನ್ನ ಮಾತು ಕೇಳು ತಂಗೀ. ತಪ್ಪು ಒಪ್ಪಿಕೊಂಡು ಬಿಡು. ನೀವಿಬ್ಬರೂ ಸೆಟ್ಟಿಗಿರದಿದ್ದರ ಈ ಮನಿ ನಡಿಯೂದು ಹ್ಯಾಂಗ?

**ಸರೋಜ:**

ಛೆ. ಛೆ. ಅವಳ ಕಾಲು ಹಿಡಿಯುವದೇ! ಜೀವ ಹೋಗುವ ಪ್ರಸಂಗ ಬಂದರೂ ಅವಳ ಕಾಲು ಹಿಡಿಯಲಿಕ್ಕಿಲ್ಲ ನನಗೂ ಸೈರಿಸಿ ಸೈರಿಸಿ ಸಾಕಾಗಿ ಹೋಯಿತು. ನನ್ನ ಬದಲು ಇನ್ನೊಬ್ಬರಿದ್ದಿದ್ದರೇನು ಮಾಡುತ್ತಿದ್ದರೋ!

**ಮಲ್ಲಪ್ಪ:**

ಎಷ್ಟಾದರೂ ಅವಳು ನಿನಗ ದೊಡ್ಡವಳು. ನನ್ನ ಹೆಂಡತಿ....

**ಸರೋಜ:**

ಇಂಥ ಮೂರ್ಖಳನ್ನು ಮದುವೆಯಾಗಿ ಗೋಳಾಡುವ ನಿನ್ನ ಕಂಡು ಕನಿಕರ ಬರುತ್ತದೆ ನನಗೆ.

**ಮಲ್ಲಪ್ಪ :**

ನೀ ಹಿಂಗೆಲ್ಲ ನಾಲಗೀ ಸಡಿಲು ಬಿಡಬಾರದು. ಅವಳು ಮೂರ್ಖಳಾಗಿದ್ದರೂ ಹಳ್ಳಿಯವನಾದ ನನಗ ತಕ್ಕ ಹೆಣ್ಣು. ನಿನ್ನಂಥಾ ನಾಜೂಕು ಹುಡುಗೀನ ನಾನೂ ಮದುವಿಯಾಗಿದ್ದರ ಇಷ್ಟೊತ್ತಿಗೆ ನನ್ನ ಗತಿ ಏನಾಗುತ್ತಿತ್ತೊ !

**ಸರೋಜ :**

ಅವಳೂ ಹಾಗೇ. ನೀನೂ ಹಾಗೇ. ನಯ ವಿನಯ ಸ್ವಲ್ಪವೂ ಗೊತ್ತಿಲ್ಲ.

**ಮಲ್ಲಪ್ಪ :**

ಗೊತ್ತಿರಲಿಕ್ಕಿಲ್ಲ ಅನ್ನು. ಬೆಳಗಿಸಿಂದ ಸಂಜೀತನಕ ಬೆವರು ಸುರಿಸಿ ದುಡಿಯುವದಾದರೂ ಗೊತ್ತೈತಿಲ್ಲ! ಅಷ್ಟಾದರ ಸಾಕು ನಮಗ. ಹೂಂ. ಈಗೇನು ಹೇಳುತ್ತೀ? ನಾ ಹೇಳಿದ ಹಾಂಗ ಮಾಡುತೀಯೋ ಇಲ್ಲೋ?

(ಸರೋಜ ಯೋಚನಾ ಮಗ್ನಳಾಗುವಳು)

**ಸರೋಜ .**

(ನಿರುತ್ಸಾಹದಿಂದ) ಹೂಂ. ಇನ್ನೇನು ಮಾಡುವದು! ಆಯಿತು. ನೀನು ಹೇಳಿದ ಹಾಗೇ ಮಾಡುತ್ತೇನೆ. ನನ್ನಿಂದಾಗಿ ನಿನಗೂ ಯಾಕೆ ತೊಂದರೆಯಾಗಬೇಕು? ಆದರೆ, ಒಂದು ಮಾತು. ನಾನು ಅವಳ ಕ್ಷಮೆಯನ್ನೇನೋ ಕೇಳುತ್ತೇನೆ. ಆದರೆ, ಆಗ ಬೇರೆ ಯಾರೂ ಇರಬಾರದು.

**ಮಲ್ಲಪ್ಪ :**

(ಆನಂದದಿಂದ) ಜಗಳ ಆಗಿರೂದು ನಿಮ್ಮಿಬ್ಬರೊಳಗ. ಅದನ್ನ ತೀರಿಸಿಕೋಬೇಕಾದವರು ನೀವು. ಮೂರನೆಯವರು ಯಾಕ ಅದರಾಗ? ನೀನು ಪಾರ್ವತಿಯಂಥಾ ಹಟಮಾರಿಯಲ್ಲ ಸರೋಜಾ. (ಒಳಬಾಗಿಲ ಕಡೆ ತಿರುಗಿ) ಪಾರ್ವತೀ, ಏ ಪಾರ್ವತೀ!

(ಪಾರ್ವತಿ ಬರುವಳು. ಮಲ್ಲಪ್ಪ ಹೊರಗೆ ಹೊರಡುವನು.)

**ಪಾರ್ವತಿ :**

ನನ್ನ ಕರದು ನೀವೆಲ್ಲಿ ಹೊಂಟಿರಿ?

**ಮಲ್ಲಪ್ಪ:**

ಸದಾಶಿವನ್ನ ಕರಕೊಂಡು ಬರ್ತೀನಿ. ಸರೋಜ ನಿನಗೇನೋ ಹೇಳುವವ ಳಿದ್ದಾಳ. ನೀವಿಬ್ಬರೂ ಮಾತಾಡುತಿರ್ರಿ. ನಾ ಬರ್ತೀನಿ.

**ಪಾರ್ವತಿ:**

ಇಂಥಾ ಸೊಕ್ಕಿನ ಹೆಣ್ಣಿನ ಸಂಗಡ ಏನು ಮಾತು? ಏನಂತಾಳೋ ಕೇಳಿರಿ ನೀವೇ.

**ಮಲ್ಲಪ್ಪ:**

ನೀವಿಬ್ಬರಃ ಮಾತಾಡಿದರ ನೆಟ್ಟಗೆ. ನಾ ಹೋಗಿ ಬರ್ತೀನಿ (ಎಡಗಡೆ ನಡೆಯುವನು.)

**ಪಾರ್ವತಿ:**

ನಿಲ್ಲಿರಿ, ಒಂದೀಟು ನಿಲ್ಲಿರಿ. (ಅವನು ತಡೆಯುವನು) ಒಳೇ ಚೆಲೋನಃ ನಡ ಸೀರಲ್ಲ ನೀವೂ! ನಾಕು ಮಂದಿಯ ಮುಂದ ನನಗ ಅಪಮಾನಮಾಡಿ ಈಗ ಗುಟ್ಟಿನಾಗ ತಪ್ಪಾತು ಅನ್ನುವಾಕಿಯೇನು ಈಕಿ? ಹೀಂಗ ಅತ್ತು ಕರದು ಕಾಲು ಹಿಡಿಸಿಕೊಳ್ಳೂದು ನನಗೇನು ಬ್ಯಾಡ.

**ಸರೋಜ:**

ಮತ್ತೆ ಹ್ಯಾಗೆ ನಿನ್ನ ಕಾಲು ಹಿಡಿಯಬೇಕು?

**ಪಾರ್ವತಿ:**

(ಅಣಕದಿಂದ) ಹೆಂಗ ಅಂದರಃ ಇವರೂ ಸದಾಶಿವ ಇಬ್ಬರೂ ಇದ್ದಾಗ ಅವರಿಬ್ಬರ ಮುಂದ ನನ್ನ ಕಾಲು ಹಿಡೀಬೇಕು.

**ಸರೋಜ:**

(ಅವಮಾನಿತಳಾಗಿ) ಅವರ ಮುಂದೆ ಯಾಕೆ ಹಿಡಿಯಬೇಕು? ನಾನು ತಪ್ಪಾಯಿತನ್ನೋದು ನಿನಗೆ.

**ಪಾರ್ವತಿ:**

ನನ್ನ ಬೈದು ಅಪಮಾನ ಮಾಡಿದಿಯಲ್ಲಾ, ಅವರೆದುರಿನಾಗಃ ತಪ್ಪಾತು ಅನ್ನಾಕಬೇಕು.

**ಮಲ್ಲಪ್ಪ :**

ಇರಲಿ ಬಿಡಾಕಿ! ಎಷ್ಟೆರೆ ಕಾಡಿಸುತೀ ಪಾಪ ಹುಡುಗೀನ!

**ಪಾರ್ವತಿ :**

ತನ್ನ ನಾಲಗೀನ್ನ ತನ್ನ ಹಿಡಿತದಾಗ ಇಟ್ಟುಕೊಳ್ಳದಾಕಿ ಎಂಥಾ ಹುಡುಗಿ! ಅವಳಿಗ್ಯಾಕ ಪಾಪ ಅನ್ನಬೇಕು?

**ಮಲ್ಲಪ್ಪ :**

ನೀನೊಬ್ಬಾಕಿ ಭಯಂಕರ ಹಟಮಾರಿ ಹೆಣ್ಣು.

**ಪಾರ್ವತಿ :**

ಮತ್ತ ನಾನು ಹಟಮಾರಿಯೇನ?

**ಮಲ್ಲಪ್ಪ :**

ನೀ ಹಟ ಮಾಡುವ ಹಾಂಗ ಎಲ್ಲಾರ ಮುಂದ ಅವಳು ತಪ್ಪಾತು ಅಂದರ ನಿನಗೇನ ಭಾಗ್ಯ ಬರುತ್ತೈತೀ?

**ಪಾರ್ವತಿ :**

ನನಗೇನ ಬರೂದಿಲ್ಲ. ಅವಳಿಗೆ ಬುದ್ಧಿ ಬರುತ್ತೈತಿ, ಬುದ್ಧಿ.

**ಸರೋಜ :**

ಪಟ್ಟಣದಲ್ಲಿ ಬೆಳೆದು ಮ್ಯಾಟ್ರಿಕ್‌ವರೆಗೆ ಕಲಿತ ನನಗೆ ನೀನು ಬುದ್ಧಿ ಕಲಿಸಬೇಕಾಗಿ ಬಂತು! ಆಯಿತಲ್ಲ! ನೀನೇ ಗೆದ್ದೆ. (ವಿನಯದಿಂದ) ಸಿಟ್ಟಿನಲ್ಲಿ ನಾನು ಅಂದದ್ದಕ್ಕೆ ಕ್ಷಮಿಸು ಅತ್ತಿಗೇ....ತಪ್ಪಾಯಿತು. (ಮೊಳಕಾಲೂರಿ ನಮಸ್ಕಾರ ಮಾಡುವಳು.)

**ಪಾರ್ವತಿ :**

ಇಂಥಾ ಢೋಂಗಿನ ಮಾತು ನನಗ ಬ್ಯಾಡ. ನಾ ಹೇಳಿದ ಹಾಂಗ ಎಲ್ಲಾರ ಮುಂದ ತಪ್ಪಾತನ್ನಬೇಕು.

**ಸರೋಜ :**

(ಕಳವಳದಿಂದ) ಅತ್ತಿಗೇ!

**ಪಾರ್ವತಿ :**

ಅದೆಲ್ಲಾ ನಾ ಕೇಳುವಾಕಿಯಲ್ಲ. ಸದಾಶಿವ ಬರಲಿ. ಆ ವ್ಯಾಲ ಮುಂದಿನ ಮಾತು.

**ಸರೋಜ :**

ನಿನ್ನ ಹುಟ್ಟುಗುಣಾ ಹ್ಯಾಗೆ ಬಿಟ್ಟೀ ನೀನು! ನೀನು ಶುದ್ಧ ಅನಾಗರಿಕ ಒರಟು ಹೆಣ್ಣು!

**ಮಲ್ಲಪ್ಪ :**

(ತಾಳ್ಮೆಗೆಟ್ಟು) ಅವಳನ್ನ ಹಾಂಗೆಲ್ಲಾ ಬಯ್ಯಬ್ಯಾಡ ಸರೋಜಾ.

**ಪಾರ್ವತಿ :**

ನೋಡ್ರಿ, ನೋಡ್ರಿ. ಈಗೂ ಬುದ್ಧಿ ಬರಲಿಲ್ಲ ಇವಳಿಗೆ.

**ಮಲ್ಲಪ್ಪ :**

(ಹಣೆ ಚಚ್ಚಿಕೊಂಡು) ಶಿವ ಶಿವಾ, ಮಾದೇವಾ! ಈ ಹೆಂಗಸರ ಜಗಳದಾಗ ಸಾಕುಸಾಕಾಗಿ ಹೋತು. (ಅತ್ತಿತ್ತ ತಿರುಗುವನು)

**ಪಾರ್ವತಿ :**

ನನಗೂ ಸಾಕಾಗಿ ಹೋತು. ಈ ಮನಿಯ ಮಾಲಕರ್‍ಯಾರು? ನಾನೋ, ಇವಳೋ? ಇವಳು ನನ್ನ ಮಾತು ಕೇಳಬೇಕೋ? ನಾನು ಇವಳ ಮಾತು ಕೇಳಬೇಕೋ?

**ಮಲ್ಲಪ್ಪ :**

ಇವಳು ನಿನ್ನ ಮಾತು ಕೇಳಬೇಕು. ಅದೇನೋ ಖರೆ. ಆದರೂ ಎಲ್ಲಾರ ಮುಂದ ಅವಳ ಅಪಮಾನ ಮಾಡಬೇಕೆನ್ನುವ ಕುನಸಿನ ಬುದ್ಧಿ ಚಲೋದಲ್ಲ.

**ಪಾರ್ವತಿ .**

ಮತ್ತ ಅವಳನ್ನ ಉಬ್ಬಿಸಾಕ ಹತ್ತಿದಿರಿ. ಇವಳು ಬಂದಾಗಿಂದ ನೀವೇನೋ ಒಂದು ತರಾ ಆಗಿಬಿಟ್ಟೀರಿ. ಇವಳ್ಯಾವ ಮುಹೂರ್ತದಾಗ ನನ್ನ ಮನ್ಯಾಗ ಕಾಲಿಟ್ಟಳೋ, ನಿಮ್ಮ ಮನಸ್ಸೂ ಕೆಡಿಸಿ ನನಗೂ ನಿಮಗೂ ಜಗಳ ಹಚ್ಚುತ್ತಿ ದ್ದಾಳೆ!

**ಮಲ್ಲಪ್ಪ :**

ನನಗೂ ನಿನಗೂ ಯಾವಾಗ ಬಂತೇ ಜಗಳ?

**ಪಾರ್ವತಿ :**

ಜಗಳ ಅಲ್ಲದಿದ್ದರs? ಇವಳು ಬರೂದಕ್ಕ ಮೊದಲು ನಮ್ಮಿಬ್ಬರಿಗೂ ಒಮ್ಮೆ ಯಾದ್ರೂ ವಾದ ಬಂದಿತ್ತೇನ? ಹೆಂಗ ಬಂಗಾರದಾಂಗ ಇದ್ದಿವಲ್ಲಾ ನಾವಿಬ್ಬರು! ಇವಳು ಬಂದದ್ದs ತಡಾ, ಸುರು ಆತು ತಂಟೆ. ನೀವೂ ಅವಳಂದ ಹಾಂಗು ಕುಣೀತೀರಿ. ಕೈಹಿಡಿದ ಹೆಂಡತಿಯ ಕಡೆ ಒಂದಾದ್ರೂ ಮಾತು ಅಂತೀರಾ?

**ಮಲ್ಲಪ್ಪ .**

ಅನ್ನುವದಕ್ಕ ನೀ ಎಲ್ಲಿ ಬಿಡುತೀ ಮಹಾರಾಯಿತೀ? ನಿನ್ನ ಬಾಯಿಗೇನ ಲಂಗು ಲಗಾಮs?

**ಪಾರ್ವತಿ :**

ಮತ್ತ ತಗದಿರಿ ಬಾಣಾನ್ನ! ನಾ ಯಾವದೂ ಕೇಳೂದಿಲ್ಲ. ಈ ಮನಿಗೆ ಯಾರಾದರೊಬ್ಬರು ಮಾಲಕರಿರಬೇಕು. ನಾನಾದರೂ ಇರಬೇಕು. ಇಲ್ಲಾ ಇವಳಾದರೂ ಇರಬೇಕು. ಅವಳೇ ಇರಲಿ ಅಂದರ ನಾ ಹೊಂಟುಬಿಡ್ತೀನಿ ನನ್ನ ತವರುಮನಿಗೆ.

**ಮಲ್ಲಪ್ಪ :**

(ಹಣೆ ಹಿಡಿದು ನೆಲಕ್ಕೆ ಕುಸಿದು ಕುಳಿತು) ಎಂಥಾ ಕೆಟ್ಟ ಬುದ್ಧಿ ಬಂತೇ ನಿನಗ!

**ಪಾರ್ವತಿ :**

ಎಂಥಾದ್ದೋ ಏನೋ. ಅಂತೂ ನಾ ಹೇಳಿದಾಂಗ ಇವಳು ಸದಾಶಿವನ ಮುಂದ ನನ್ನ ಕಾಲು ಹಿಡಕೋಬೇಕು. ಇಲ್ಲದಿದ್ದರ ನಾನೀ ಮನಿಯೊಳ ಗಿರೂದಿಲ್ಲ.

**ಮಲ್ಲಪ್ಪ :**

ಪಾಪ! ಸರೋಜಳನ್ನ ಬಿಟ್ಟುಬಿಡು ಮಹಾರಾಯ್ತಿ! ನಿನಗ ಕೈ ಮುಗೀ ತೀನಿ!

**ಪಾರ್ವತಿ :**

ನಿಮಗ್ಯಾರು ಹೇಳಿದ್ರು ಕೈ ಮುಗೀಲಿಕ್ಕೆ? ಸದಾಶಿವನ ಮುಂದ ತಪ್ಪಾತು ಅನ್ನೂದಕ್ಕ ಒಪ್ಪದಿದ್ದರ ಇವಳು ಹೊಂಟುಬಿಡಲಿ ಈ ಮನೀಬಿಟ್ಟು.

**ಮಲ್ಲಪ್ಪ :**

ಕಟುಕರ ಹಾಂಗ ಮಾತಾಡಬಾರದು ಪಾರ್ವತೀ. ಅವಳೆಲ್ಲಿಗೆ ಹೋಗ ಬೇಕು ಪಾಪ! ಅವಳು ಬರುವಾಗ ನೀನೇನು ಬ್ಯಾಡಾ ಅನ್ನಲಿಲ್ಲ.

**ಪಾರ್ವತಿ :**

ಏನೋ ನಮಗೂ ಒಂದೀಟು ಸಹಾಯ ಮಾಡಿಯಾಳು ಅಂತ ನಾ ಇರಲಿ ಅಂದೆ. ಇವಳು ಬಂದು ಚಲೋ ಸಹಾಯನ ಮಾಡಾಕ ಹತ್ತಿದಳು! ನನಗೂ ನಿಮಗೂ ಕೆಡಿಸಿಡೂದು! (ಮುಖಕ್ಕೆ ಸೆರಗು ಹಾಕಿಕೊಂಡು ಅಳುವ ಹಾಗೆ ನಟಿಸುವಳು.)

**ಮಲ್ಲಪ್ಪ :**

ಸುಮ್ಮಸುಮ್ಮನೆ ಇಲ್ಲದ್ದೆಲ್ಲಾ ತಲಿಯಾಗ ಹಾಕ್ಕೊಳ್ಳಬ್ಯಾಡ. ನಿನ್ನ ಮಾತು ಕೇಳಿ ನಾ ಇವಳನ್ನ ಮನಿಬಿಡಿಸಿ ಕಳಿಸುತೀನಂತ ತಿಳಿದೀಯೇನ? ಮದುವೀ ಮಾಡಿಕೊಂಡು ಗಂಡನ ಮನಿಗೆ ಹೋಗುವ ತನಕ ನಾನವಳನ್ನ ಕಳಿಸುವ ದಿಲ್ಲಂತ ತಿಳಿದುಕೊಂಡು ಬಿಡು.

**ಪಾರ್ವತಿ :**

ತಿಳೀತು, ತಿಳೀತು, ಎಲ್ಲಾ ತಿಳೀತು. (ಬಿಕ್ಕುತ್ತ) ನಾನs ಹಾಳಾಗಿ ಹೋಗಿ ಬಿಡ್ತೀನಿ. ಇವಳೇ ಇರಲಿ ಗೂಗಿಯ ಹಾಂಗ.

**ಮಲ್ಲಪ್ಪ :**

(ಸಿಟ್ಟಿನಿಂದ) ಬಾಯ್ಮುಚ್ಚು. ಬಲ್ಲಾಂಗ ಮಾತಾಡಬ್ಯಾಡ. ಹೋಗ್ತೀನಿ, ಹೋಗ್ತೀನಿ ಅಂತಾಳ. ಅಲ್ಲಿ ನಿನ್ನ ತವರಿನಾಗ ರೊಟ್ಟಿಗೆ ಗತಿ ಇಲ್ಲ.

**ಪಾರ್ವತಿ :**

ನಾನೇನ ಅವರಿಗೆ ಭಾರ ಆಗಿರೂದಿಲ್ಲ. ನಂದು ನಾ ದುಡಕೊಂಡು ತಿಂತೀನಿ.

**ಮಲ್ಲಪ್ಪ :**

(ಸಮಾಧಾನದಿಂದ) ಹೋಗಲಿ ಇದೊಂದು ಬಾರಿ. ಸುಮ್ಮನಿರಾಕ!

**ಪಾರ್ವತಿ :**

ಅದೊಂದೂ ನಾ ಕೇಳುವಾಕಿಯಲ್ಲ.

**ಮಲ್ಲಪ್ಪ :**

ಕೇಳೇ! ನಾ ಹೇಳೂ ಮಾತು ಕೇಳು. ಹಟಾ ಮಾಡಬ್ಯಾಡಾ.

**ಸರೋಜ :**

ಮಲ್ಲಣ್ಣಾ !

**ಮಲ್ಲಪ್ಪ .**

(ದಿಙ್ಮೂಢನಂತೆ) ಏನು ಬಂತಪ್ಪಾ ಪಂಚಾಯ್ತಿ! ಇತ್ತ ಹೆಂಡ್ತಿ. ಇತ್ತ ತಂಗಿ! ಒಬ್ಬರೂ ನನ್ನ ಮಾತು ಕೇಳೂದಿಲ್ಲ.

**ಸರೋಜ :**

ನಾನೇ ಸೋಲುತ್ತೇನೆ ಮಲ್ಲಣ್ಣಾ ! (ಪಾರ್ವತಿಗೆ) ಆಗಲಿ ಅತ್ತಿಗೆ, ನೀನು ಹೇಳಿದ ಹಾಗೇ ಮಾಡುತ್ತೇನೆ.

**ಪಾರ್ವತಿ .**

(ಜಂಬದಿಂದ) ನೋಡಿದಿರಾ, ಹೆಂಗ ಹಾದಿಗೆ ಬಂದಳು !

**ಸರೋಜ :**

ಹಳ್ಳಿಯವರೆಲ್ಲರ ಎದುರಿಗೂ ಕೂಡಾ ನಿನ್ನ ಕ್ಷಮೆ ಕೇಳಲೂ ತಯಾರಿದ್ದೇನೆ ನಾನು. ಹೋಗು ಮಲ್ಲಣ್ಣಾ, ಅವರನ್ನೆಲ್ಲಾ ಕರೆದುಕೊಂಡು ಬಾ. ಒಮ್ಮೆ ಆಗುವದೆಲ್ಲಾ ಆಗಿ ಹೋಗಲಿ.

(ಮಲ್ಲಪ್ಪ ಕೋಪದಿಂದ ಹೆಂಡತಿಯನ್ನು ದಿಟ್ಟಿಸುತ್ತ ಹೋಗುವನು.)

**ಸರೋಜ :**

ನನ್ನ ಕಂಡರೆ ನಿನಗ್ಯಾಕೆ ಇಷ್ಟು ದ್ವೇಷ ಅತ್ತಿಗೇ ?

ಪಾರ್ವತಿ :

ನಾನ್ಯಾಕ ದ್ವೇಷ ಮಾಡಲಿ ನಿನ್ನ? ನೀ ನಿನ್ನ ದಿವಾಕಿನಾಗಿ ಇರುವಾಕಿ. ಈ ಮನಿಯ ಮಾಲಕಳು ನಾ ಅನ್ನೂದನ್ನ ಮರತುಬಿಡುತೀ

ಸರೋಜ :

ನಾನೂ ಪರದೇಶಿಯಾದೆ. ಮಲ್ಲಣ್ಣ ಕರೆದ, ಬಂದೆ. ನನಗೂ ಇಲ್ಲಿಯ ವರೆಗೂ ಅಣ್ಣ ಇರಲಿಲ್ಲ, ಅತ್ತಿಗೆ ಇರಲಿಲ್ಲ. ಯಾರೂ ಇರಲಿಲ್ಲ. ನೀವು ಸಿಕ್ಕಿರಿ. ನಿಮ್ಮ ಸಂಗಡ ಸುಖವಾಗಿರೋಣ ಅಂತ ಬಂದರೆ ನೀನು ಮಾತು ಮಾತಿಗೂ ನನಗೆ ಸಿಡಿಸಿಡಿ ಅನ್ನಹತ್ತಿದೆ.

ಪಾರ್ವತಿ :

ನಿನ್ನ ರೀತಿ ನಡಾವಳಿ ನೋಡಿದರ ಎಂಥಾವರಾದ್ರೂ ಸಿಡಿಸಿಡಿ ಅಂದಾರು!

ಸರೋಜ :

ಸಿಡಿಸಿಡಿ ಅನ್ನುವ ಹಾಗೆ ನಾನೇನು ಮಾಡುತ್ತೇನೊ ತಿಳಿಯುವದಿಲ್ಲಪ್ಪ. ಆದದ್ದು ಆಗಿಹೋಯ್ತು. ಇನ್ನಾದರೂ ನಾನು ನೀನು ಅಣ್ಣ ಮೂವರೂ ಪ್ರೇಮದಿಂದಿರೋಣ. ನಿಮ್ಮನ್ನು ಬಿಟ್ಟು ನನಗಾದರೂ ಯಾರಿದ್ದಾರೆ?

ಪಾರ್ವತಿ :

ಈ ಬಣ್ಣದ ಮಾತೆಲ್ಲಾ ನಾ ಬಲ್ಲೆ ಬಿಡೇ.

ಸರೋಜ :

ನನ್ನದೆಲ್ಲಾ ನಿನಗೆ ಬಣ್ಣದ ಮಾತೇ ಆಗಿ ಕಾಣಬೇಕೇ! ನನ್ನ ದೌರ್ಭಾಗ್ಯ. ನಿನ್ನ ಬಗ್ಗೆ ನನಗೆ ನಿಜವಾಗಿಯೂ ಮೆಚ್ಚಿಕೆ. ನಿನ್ನಷ್ಟು ಕಷ್ಟಪಟ್ಟು ದುಡಿಯುವವರನ್ನು ನಾನೆಲ್ಲಿಯೂ ನೋಡಿರಲಿಲ್ಲ. ಇಲ್ಲಿಗೆ ಬಂದಾಗಿನಿಂದ ನಾನೂ ಬಹಳ ಸುಧಾರಿಸಿದ್ದೇನೆ.

ಪಾರ್ವತಿ :

ನನ್ನ ನೀನೇನು ಹೊಗಳಬೇಕಾಗಿಲ್ಲ ಬಿಡು, ವ್ಯಾಲ ವ್ಯಾಲ. ಒಳಗೊಂದು ಇಟ್ಟುಕೊಂಡು ಹೊರಗೊಂದು ಮಾತಾಡೂದು!

**ಸರೋಜ :**

(ನಿರಾಸೆಯ ಧನಿಯಲ್ಲಿ) ಹೂಂ. ಇನ್ನು ನಿನ್ನ ಹತ್ತಿರ ನಾನೇನು ಮಾತಾಡಿದರೂ ವ್ಯರ್ಥ.

**ಪಾರ್ವತಿ :**

ತಪ್ಪಾಯಿತಂತ ಕೇಳಿಕೊಳ್ಳುವವಳಿಗೆ ಎಂಥಾ ಸೊಕ್ಕು ಇದೂ!

**ಸರೋಜ :**

(ಕಟುನಗೆಯೊಡನೆ) ಹೂಂ. ನಾನೇ ಸೊಕ್ಕಿನವಳು!

**ಪಾರ್ವತಿ :**

(ರೇಗಿ) ನನ್ನ ನೋಡಿ ನಗಬ್ಯಾಡ. ತಣ್ಣಗs ಬಾಯಿ ಮುಚ್ಚಿಕೋ.

**ಸರೋಜ :**

ನಾನು ನಗುವ ಹಾಗೆ ಮಾಡುವವಳು ನೀನೇ.

**ಪಾರ್ವತಿ :**

ನಿನ್ನ ಕಣ್ಣಾಗ ನಾನೊಬ್ಬ ಶೂರ್ಪಣಖಿಯ ಹಾಂಗ ಕಾಣುತೇನೇನು?

(ಸರೋಜ ತಡೆಯಲಾರದೆ ಗಟ್ಟಿಯಾಗಿ ನಗುವಳು.)

**ಪಾರ್ವತಿ :**

ಎಷ್ಟು ಧೈರ್ಯೇನs ನಿನಗ ನನ್ನ ಕಂಡು ನಗೂದಕ್ಕ! ನನ್ನ ಮನಿಯಾಗಿದ್ದು, ನನ್ನ ಕೂಳು ತಿಂದು....

(ಎನ್ನುವಷ್ಟರಲ್ಲಿ ಸದಾಶಿವ, ಮಲ್ಲಪ್ಪ ಬಂದುದನ್ನು ಕಂಡು ಮಾತನ್ನು ಅಲ್ಲಿಗೇ ನಿಲ್ಲಿಸುವಳು.)

**ಸದಾಶಿವ :**

ಏನು, ಕರೆದಿರಂತಲ್ಲಾ?

**ಪಾರ್ವತಿ :**

ಇವರು ಹೇಳಲಿಲ್ಲೇನು? ಇವಳೇನೋ ನನಗ ತಪ್ಪಾತು ಅಂತ ಅಂದು ನಮಸ್ಕಾರ ಹಾಕಬೇಕೆಂದು ಮಾಡಿದಾಳ.

**ಸದಾಶಿವ :**

(ಸೊಂಪ ದನಿಯಲ್ಲಿ) ಕೆಲಸ ಬಿಟ್ಟು ಸುಮ್ಮನೆ ಇಲ್ಲಿಗೆ ಬಂದಂತಾಯಿತು. ಹೆಂಗಸರ ತಂಟೆ. ..

**ಸರೋಜ :**

(ಪಾರ್ವತಿಯ ಎದುರಿಗೆ ನಿಂತು) ತಪ್ಪಾಯಿತು ಅತ್ತಿಗೇ. ನನ್ನ ಕ್ಷಮಿಸು (ಕಾಲು ಮುಟ್ಟಿ ನಮಸ್ಕರಿಸುವಳು.)

**ಮಲ್ಲಪ್ಪ.**

ಈಗಾದರೂ ನಿನ್ನ ಮನಸ್ಸು ಸಮಾಧಾನವಾಯಿತೇನು ?

**ಪಾರ್ವತಿ :**

(ಬಿಂಕದಿಂದ ನಗುತ್ತಾ) ಇದಂ ಮೊದಲನೇ ಬಾರಿ ನೋಡು ನೀ ತಪ್ಪಾತು ಅಂದದ್ದು.

**ಸರೋಜ :**

ನಾನು....ನಾನು....ನನ್ನ ತಪ್ಪು....

(ಮಾತು ನಿಂತು, ಅವಳ ಕತ್ತು ಉಬ್ಬಿ ಬರುವುದು. ತುಟಿ ಕಂಪಿಸುವವು. ಪಾರ್ವತಿಯನ್ನು ಅಸಹನೆಯಿಂದ ನೋಡುವಳು.)

**ಪಾರ್ವತಿ :**

ಕಾಲು ಹಿಡಿದಾಯ್ತು, ಇನ್ನು ಕಣ್ಣೀರು ಹಾಕಬೇಕೇನು ?

**ಸದಾಶಿವ :**

ಸ್ವಲ್ಪ ಕೆಲಸ ಉಳಿದಿದೆ. ಮುಗಿಸಿಕೊಂಡು ಬಂದುಬಿಡುತೇನೆ. ನಡೆ ಮಲ್ಲಣ್ಣಾ.

(ಅವರು ಹೋಗುತ್ತಿದ್ದ ಹಾಗೆ ಸರೋಜಾ ಧ್ವನಿಯೆತ್ತುವಳು.)

**ಸರೋಜ :**

ಸದಾಶಿವ! ಸದಾಶಿವ!

(ಸದಾಶಿವ ತಡೆದು, ಹಿಂದಿರುಗಿ ಅವಳ ಬಳಿಸಾರುವನು. ಸರೋಜಳ ಮುಖ ಸಿಟ್ಟಿನಿಂದ ಆರಕ್ತವಾಗಿರುವುದು.)

**ಸದಾಶಿವ** :

ಯಾಕೆ ಸರೂ, ಎಲ್ಲಾ ಮುಗಿಯಿತಲ್ಲಾ? ಮತ್ತ್ಯಾಕೆ ಕೋಪ?

**ಸರೋಜ** :

(ಗದ್ಗದ ಕಂಠದಿಂದ) ಎಲ್ಲಾ ಮುಗಿಯಿತು ಸದಾಶಿವ! ನನ್ನ ಮಾನ, ನನ್ನ ಮರ್ಯಾದೆ, ನನ್ನ ವ್ಯಕ್ತಿತ್ವ ಎಲ್ಲಾ ಮುಗಿಯಿತು, ಈ ಮನೆಯ ಮಟ್ಟಿಗೆ. ವ್ಯಕ್ತಿತ್ವ ಕಳೆದುಕೊಂಡು ಬದುಕುವದೆಂದರೆ ಪಶು ಬದುಕಿದ ಹಾಗೆ. ನೀವು ಬಂದಂದಿನಿಂದ ಇಲ್ಲಿ ನಡೆಯುವದನ್ನೆಲ್ಲ ನೋಡಿದ್ದೀರಿ. ನಾನಿಲ್ಲಿ ಇರುವದು ಈಕೆಗೆ ಇಷ್ಟವಿಲ್ಲ ಅನ್ನುವದೂ ನಿಮಗೆ ಗೊತ್ತಾಗಿರಬಹುದು.

**ಸದಾಶಿವ** :

(ಸಂಕೋಚದಿಂದ) ಗೊತ್ತಾಗಿದೆ ಸರೋಜಾ, ಎಲ್ಲಾ ಗೊತ್ತಾಗಿದೆ.

**ಸರೋಜ** :

(ಉದ್ವೇಗದಿಂದ) ಎಷ್ಟು ಕಷ್ಟ ಬಂದರೂ ನಾನು ಸಹಿಸಿಕೊಳ್ಳಬಲ್ಲೆ. ಆದರೆ. .. ಆದರೆ....ಈ ಭಯಂಕರ ಅವಮಾನವನ್ನು ಮಾತ್ರ ಸಹಿಸಲಾರೆ. ಸದಾಶಿವ, ನನ್ನನ್ನು ನಿಮ್ಮ ಸಂಗಡ ಕರೆದುಕೊಂಡು ಹೋಗುತ್ತೀರಾ?

**ಸದಾಶಿವ** :

(ಆಶ್ಚರ್ಯದಿಂದ) ನೀನು. . ನೀನು . ನನ್ನ ಸಂಗಡ?

**ಸರೋಜ** :

ಹೌದು. ನಾನು ನಿಮ್ಮ ಸಂಗಡ ಎಲ್ಲಿಗೆ ಬೇಕಾದರೂ ಬರಲು ಸಿದ್ಧಳಿದ್ದೇನೆ. ನಿಮ್ಮ ಮನೆಯಲ್ಲಿ ಅಡಿಗೆಮಾಡಿ, ಕಸ ಮುಸರೆ ನೋಡಿಕೊಂಡಾದರೂ ಇದ್ದೇನು. ಇನ್ನು ಮಾತ್ರ ಇಲ್ಲಿರಲಾರೆ.

**ಸದಾಶಿವ** :

ನಿಜವಾಗಿಯೂ ಬರುತ್ತೀಯಾ ಸರೋಜಾ? ಅಥವಾ ಇದೆಲ್ಲವನ್ನೂ ಚೇಷ್ಟೆಗಾಗಿ ಆಡುತ್ತೀಯೋ?

**ಸರೋಜ** :

ಚೇಷ್ಟೆಯಲ್ಲ ಸದಾಶಿವ. ಪೂರ್ಣ ಗಾಂಭೀರ್ಯದಿಂದಲೇ ಆಡುತ್ತಿದ್ದೇನೆ.

**ಮಲ್ಲಪ್ಪ:**

ಇದೇನೇ ಸರೋಜಾ ನಿನ್ನ ಹುಡುಗಾಟ?

**ಸರೋಜ:**

ಹುಡುಗಾಟವಲ್ಲ ಅಣ್ಣಾ. ಇದು ವಿಧಿಯ ಆಟ!

**ಸದಾಶಿವ.**

ನೀನು ಬರುತ್ತೇನೆ ಅಂದರೆ ಬೇಡ ಅನ್ನುವದಕ್ಕೆ ನನಗಾದರೂ ಹ್ಯಾಗೆ ಮನಸ್ಸಾದೀತು?

**ಮಲ್ಲಪ್ಪ:**

ಈ ಹುಚ್ಚಿಯ ಮಾತು ಮನಸ್ಸಿನ ಮ್ಯಾಲ ತಗೋಬೇಡ ಸದಾಶಿವಾ. ಅವಳ ತಲಿ ಕೆಟ್ಟ್ಯಾಂಗ ಕಾಣುತ್ತೈತಿ.

**ಪಾರ್ವತಿ:**

ತಲಿಯಾಕ ಕೆಟ್ಟೀತು? ಇವಳಿರೂದs ಹೀಂಗ. ನಾಚಿಕೆಗೇಡಿ.

**ಸರೋಜ.**

(ಕೋಪದಿಂದ ಕಂಪಿಸುತ್ತ ಪಾರ್ವತಿಯ ಮೈಮೇಲೆ ಬೀಳುವಂತೆ ನುಗ್ಗಿ) ಯಾಕೇ, ನಾಚಿಕೆಗೇಡಿ ಅಂತ ಯಾರಿಗಂತೀಯೆ!

**ಪಾರ್ವತಿ:**

(ಪ್ರತಿಭಟಿಸುತ್ತಾ) ಬಾ ನೋಡೂಣು ಒಂದು ಕೈ. ನನ್ನ ಮೈಮ್ಯಾಲ ಬರ್ತೀಯೇನು? ಬಸವಿ ಬೆಳೆದಾಂಗ ಬೆಳೆದು ಮದುವಿ ಇಲ್ಲದ ಕುಂತಾಕಿ ಗಂಡನರ ಸಂಗಡ ಹೋಗುತಾಳಂತ! ಯಾರಿಗೆ ಕೆಟ್ಟ ಹೆಸರು ತರಬೇಕಂತ ಮಾಡಿದ್ದೀ?

**ಮಲ್ಲಪ್ಪ.**

ಆವಳು ಹೇಳೂದು ಬರಾಬ್ಬರಿ ಸರೋಜಾ. ನೀ ಹೀಂಗ ಹೊಂಟುಹೋದರ ಮಂದಿ ಏನಂದಾರು ನಮಗ?

**ಸರೋಜ:**

ಮಂದಿ ಅನ್ನುವದು ನನಗೆ. ಮಂದಿ ನಗುವದು ನನ್ನ ಕಂಡು.

**ಮಲ್ಲಪ್ಪ :**

ಇದೇನು ಪಟ್ಟಣ ಅಲ್ಲ. ಪಟ್ಟಣದಾಗ ಹೆಂಗಸರಿಗೆ ಹೆಚ್ಚು ಸ್ವತಂತ್ರ ಇರುತ್ತೈತಿ. ಹಳ್ಳೀ ಸೀಮೆಯೊಳಗ ಇಂಥಾದ್ದೆಲ್ಲಾ ನಡದರ ಮಂದಿ ನಮಗ ಕಲ್ಲು ಒಗದಾರು.

**ಸರೋಜ :**

ಏನೇ ಆದರೂ ನಾನಿನ್ನು ಈ ಮನೆಯಲ್ಲಿ ಒಂದು ನಿಮಿಷವೂ ಇರುವದಿಲ್ಲ.

**ಮಲ್ಲಪ್ಪ :**

ನಿನಗೆ ಮನಸ್ಸಿಲ್ಲಂದ ಮ್ಯಾಲ ನಾವಾದರೂ ನಿನ್ನ ಯಾತಕ್ಕ ಇಟ್ಕೊಳ್ಳೋ ಬೇಕು? ಹೋಗೂದಃ ಆದರಃ ನಗ್ತಾ ಕೆಲೀತಾ ಹೋಗು. ಮುಂದಿಗೆ ಆನಂದವಾಗುವ ಹಾಂಗ ಹೋಗು. ಸದಾಶಿವನ ಸಂಗಡಲೇ ಹೋಗು. ನಾನೇನು ಬ್ಯಾಡನ್ನುವದಿಲ್ಲ. ಅವನ್ನ ಮದುವೀ ಮಾಡಿಕೊಂಡು ಹೋಗು....

**ಸರೋಜ .**

(ಬೆಚ್ಚಿ) ಮದುವೆ!

**ಮಲ್ಲಪ್ಪ :**

ಹೌದು! ಮದುವಿ! ಮದುವಿಯಿಲ್ಲದಃ ಹಂಗಃ ಹೋಗೂದಕ್ಕ ಇದೇನು ವಿಲಾಯ್ತಿ ಅಲ್ಲ, ತಿಳೀತೇನ? ಸದಾಶಿವನೂ ಚಲೋ ಮನುಷ್ಯಾ. ಅವನಿಗೇ ನಿನ್ನ ಕೊಡಬೇಕಂತ ನನ್ನ ಮನಸಿನಾಗೂ ಇತ್ತು. (ಸದಾಶಿವನ ಕಡೆ ತಿರುಗಿ) ಏನಪಾ ಸದಾಶಿವಾ, ನೀನೇನಂತಿ?

**ಸದಾಶಿವ :**

(ಮುಗುಳುನಗೆಯೊಡನೆ) ನನ್ನದೇನು ಅಡ್ಡಿಯಿಲ್ಲ, ಮಲ್ಲಣ್ಣಾ.

**ಮಲ್ಲಪ್ಪ :**

ನಿಮ್ಮಪ್ಪನೂ ಒಪ್ಪುತಾನ ಹೌದಲ್ಲೋ?

**ಸದಾಶಿವ :**

ಅವನೂ ಒಪ್ಪಬಹುದು ಅನ್ನು. ಆದರೆ....

**ಮಲ್ಲಪ್ಪ** :

ಮತ್ತೇನಪಾ ಮಾರಾಯಾ ?

**ಸದಾಶಿವ** :

ಆದರೆ. ಮೊದಲು ಒಪ್ಪಿಕೊಳ್ಳಬೇಕಾದವಳು ವಧು.

**ಮಲ್ಲಪ್ಪ** :

ಏನಂತೀ ಸರೋಜಾ, ಸದಾಶಿವನ್ನ ಮದುವಿಯಾಗಲಿಕ್ಕೆ ಒಪ್ಪುತೀ ಹೌದಲ್ಲೋ ?

**ಸರೋಜ** :

ಈ ಹಾಳುಮನೆ ಬಿಟ್ಟು ಹೋಗಲಿಕ್ಕಾಗಿ ಬಾವಿ ಬೀಳಲಿಕ್ಕೂ ಒಪ್ಪದೆ ವಿಧಿಯಿಲ್ಲ.

**ಮಲ್ಲಪ್ಪ** :

ಚ್ ! ಚ್ ! ಮಂಗಲಕಾರ್ಯದ ಮಾತು ನಡೆದಾಗ ಕೆಟ್ಟ ಮಾತಾಡಬಾರದು.

**ಸದಾಶಿವ** :

ನನ್ನನ್ನು ಮದುವೆಯಾದ ಮೇಲಾದರೂ ಸರೋಜಾ ಆನಂದದಿಂದಿರುವಳೋ ಇಲ್ಲವೊ.

**ಮಲ್ಲಪ್ಪ** .

ಯಾಕಪ್ಪಾ. ಮತ್ತೇನ ಸಂಶಯ ?

**ಸದಾಶಿವ** :

ಇದ್ದೇ ಇದೆಯಲ್ಲ, ಮಲ್ಲಣ್ಣಾ, ಮುಖ್ಯವಾದ ತಕರಾರು. ಇವಳಿಗೆ ಹಳ್ಳಿ ಅಂದರೆ ನೆತ್ತಿಮೇಲೆ ಮುಳ್ಳು.

**ಸರೋಜ** :

ಮುಳ್ಳು ಅಷ್ಟೇ ಯಾಕೆ ? ಹಾವು ಚೇಳು ಬಂದರೂ ಚಿಂತೆಯಿಲ್ಲ ಈ ನರಕದ ಸಹವಾಸ ತಪ್ಪಿದರೆ ಸಾಕಾಗಿದೆ.

**ಸದಾಶಿವ.**

ಹಾವು ಚೇಳು ಯಾಕೆ ಬಂದಾವು? ಮೊದಲು ಹಳ್ಳಿಯ ಬಗ್ಗೆ ನಿನ್ನ ಮನಸ್ಸಿನಲ್ಲಿ ಪ್ರೀತಿ ಹುಟ್ಟಬೇಕು. ಅಂದರೆ ಎಲ್ಲಾ ತಾನೇ ನರಿಹೋಗುತ್ತದೆ.

**ಮಲ್ಲಪ್ಪ.**

ಆದಷ್ಟು ಲಗೂ ಅಕ್ಕೀಕಾಳು ಹಾಕಿಬಿಟ್ಟರೆ ಚಲೋದೇ ಸದಾಶಿವ.

**ಸದಾಶಿವ:**

ಬಹಳ ಸಾದಾ ರೀತಿಯಲ್ಲಿ ಮದುವೆಯಾಗಬೇಕು ಮಲ್ಲಣ್ಣಾ. ಒಂದು ದಿನದಲ್ಲಿ ಎಲ್ಲಾ ಮುಗಿಯಬೇಕು. ಯಾತಕ್ಕೂ ಸಿಕ್ಕಸಿಕ್ಕ ಹಾಗೆ ಖರ್ಚು ಮಾಡಕೂಡದು.

**ಮಲ್ಲಪ್ಪ:**

ನಿನಗೆ ನಾನು ಏನು ಕೊಡಬೇಕು ಹೇಳು?

**ಸದಾಶಿವ:**

ಈ ವಧುವನ್ನೇ ಕೊಡುತ್ತೀಯಲ್ಲ! ಇವಳಿಗಿಂತ ಹೆಚ್ಚಿನ ವಸ್ತು ಎಲ್ಲಿಂದ ಬಂದೀತು?

**ಮಲ್ಲಪ್ಪ.**

ಹಾಂಗಂದರ ಹ್ಯಾಂಗಪಾ? ಅರಿವೆ ಆದರೂ ಕೊಡಬೇಕಾಗುತ್ತೈತಿ.

**ಸದಾಶಿವ:**

ನಿನ್ನ ಇಷ್ಟ. ಒಂದು ಖಾದಿಯ ಅಂಗಿ, ಒಂದು ಖಾದಿಯ ಧೋತರ ಆದರೆ ನಾಕು ನನಗೆ. ನಿನಗೆ ಸರೋಜಾ?

**ಸರೋಜ.**

ನನಗೆ ಏನೂ ಬೇಡ. ಉಟ್ಟ ಸೀರೆಯ ಮೇಲೇ ಮದುವೆಯಾಗಲಿಕ್ಕೆ ನಾನು ಸಿದ್ಧಳಿದ್ದೇನೆ.

**ಪಾರ್ವತಿ:**

ಮದುವೀ ಮಾಡಿಕೊಳ್ಳುವಾಗೂ ನಮ್ಮ ಅಬ್ರೂ ಕಳೀಬೇಕಂತ ಮಾಡೀಯೇನು? (ಒಳಗೆ ಹೋಗುವಳು)

**ಮಲ್ಲಪ್ಪ :**

ಹೋರಿಗಳ ಮಾತು ಲಗೂ ಮುಗಿಸಬೇಕಲ್ಲ! ಗೌಡರ ಮನಿಗೆ ಹೋಗಿ ಬರ್ತೀನಿ ಸದಾಶಿವಾ!

(ಮಲ್ಲಪ್ಪ ಹೋಗುವನು)

**ಸದಾಶಿವ :**

(ಸರೋಜಳ ಬಳಿ ಬಂದು ಅವಳ ತಲೆಯನ್ನು ನೇವರಿಸುತ್ತ) ಸರೋಜಾ!

(ಅವಳು ಅಸಮಾಧಾನದಿಂದ ದೂರ ಸರಿಯುವಳು)

**ಸದಾಶಿವ :**

ಯಾಕೆ ಸರೂ, ಈಗಲೂ ಮದುವೆಯಾಗುವ ಮನಸ್ಸಿಲ್ಲವೇ ನಿನಗೆ?

**ಸರೋಜ.**

ಮನಸ್ಸಿಲ್ಲದಿದ್ದರೂ ಬೇರೆ ವಿಧಿಯಿಲ್ಲವಲ್ಲಾ! ನನ್ನ ಹಣೇಬರಹ! ಪಾರ್ವತಿಯ ರೂಪದಲ್ಲಿ ನನ್ನ ಕರ್ಮವೇ ಕಾಡತೊಡಗಿದೆ.

**ಪಾರ್ವತಿ :**

(ಒಳಗಿನಿಂದ ರಭಸದಿಂದ ಬಂದು) ಮತ್ತೆ ಸುರುಮಾಡಿದೆಯೇನು ನನ್ನ ಬೈಯೂದಕ್ಕ! ಎಂದಾದರೂ ಹೋಗ್ತೀಯೋ ನೀ ನನ್ನ ಮನಿಬಿಟ್ಟು!

(ಎಂದು ಕೈ ತಿರುವುತ್ತಿದ್ದಂತೆ ತೆರೆಯುರುಳುವುದು)

# ಮೂರನೆಯ ಅಂಕ.

## ದೃಶ್ಯ ಒಂದು

[ರಪ್ಪಿಯ ಬೀದಿ. ಸದಾಶಿವ, ಶಂಕರಪ್ಪ ಮಾತಾಡುತ್ತ ಬರುವರು.]

**ಶಂಕರಪ್ಪ :**

ಕಡೆಗೂ ನಿನ್ನ ಹಟಾ ಸಾಧಿಸಿದಂಗಾತು ಬಿಡು.

**ಸದಾಶಿವ .**

ನನಗೇ ಆಶ್ಚರ್ಯವಾಗುತ್ತದೆ ಶಂಕರಪ್ಪಾ. ಎಲ್ಲಾ ಬಂದು ಕನಸಿನಲ್ಲಿ ನಡೆದ ಹಾಗೆ ನಡೆಯಿತು.

**ಶಂಕರಪ್ಪ .**

ಇನ್ನೂ ನಾಕೈದು ವರ್ಷ ಮದುವಿಯಾಗುವದಿಲ್ಲಂತ ಹೇಳುತ್ತಿದ್ದಳು ಅಂತಿದ್ದೆಯಲ್ಲಾ, ಒಮ್ಮೆಲೆ ಹ್ಯಾಂಗ ಒಪ್ಪಿದಳಪ್ಪಾ ?

**ಸದಾಶಿವ :**

ಅಂಥಾ ಪ್ರಸಂಗ ಬಂತು ಅಂತ ಒಪ್ಪಬೇಕಾಯಿತು. ಅವಳು ಆ ಮನೆ ಬಿಟ್ಟು ಹೊರಟರೆ ಸಾಕಾಗಿತ್ತು.

**ಶಂಕರಪ್ಪ :**

ಹಂಗಾದರ ತಾನೇ ಸಂತೋಷದಿಂದ ಮದುವೆಯಾಗಲಿಲ್ಲ ಅನ್ನು.

**ಸದಾಶಿವ :**

ಸಂತೋಷವೂ ಇಲ್ಲ, ದುಃಖವೂ ಇಲ್ಲ. ನೀನೇ ನೋಡಿದೆಯಲ್ಲ ಶಂಕರಪ್ಪ, ಮದುವೆಯ ದಿನವೆಲ್ಲಾ ಒಂದು ತರಹಾ ಗಂಭೀರವಾಗಿಯೇ ಇದ್ದಳು.

**ಶಂಕರಪ್ಪ :**

ಆ ಮ್ಯಾಲ ? ಈಗಾದರೂ ಸಮಾಧಾನದಿಂದಿದ್ದಾಳೋ ಇಲ್ಲೋ ?

**ಸದಾಶಿವ :**

ಅದನ್ನೇನು ಹೇಳಲಿಕ್ಕೆ ಬರುವಂತಿಲ್ಲ. ಈ ವಾತಾವರಣವೆಲ್ಲಾ ಅವಳಿಗೆ

ಹೊಸದು. ಕುದುರೆಯನ್ನು ಪಳಗಿಸುವ ಹಾಗೆ ಇವಳನ್ನೂ ಪಳಗಿಸ ಬೇಕಾಗುತ್ತದೆ.

**ಶಂಕರಪ್ಪ :**

ನಾ ಸ್ಪಷ್ಟ ಮಾತಾಡ್ತೀನಂತ ಸಿಟ್ಟಾಗಬೇಡ ಸದಾಶಿವಾ. ಈ ಮದಿವೆಗೆ ನೀನೂ ಬಹಾಳ ಅವಸರ ಮಾಡಿದಿ.

**ಸದಾಶಿವ :**

ಅವಸರ ಅಂತೀಯಾ ?

**ಶಂಕರಪ್ಪ :**

ಇವಳಿಗೆ ಹಳ್ಳಿ ಅಂದರಾಗುವದಿಲ್ಲ ಅಂತ ನೀನು ಹೇಳಿದ್ದಿಯೋ ಇಲ್ಲಪ್ರೋ ? ನೀನಂತೂ ಇನ್ನುಮ್ಯಾಲ ಹಳ್ಳಿಯೊಳಗೇ ಇರುವವ. ನಿನ್ನ ಹೆಂಡತಿಯೂ ನಿನ್ನ ಹಾಂಗು ಹಳ್ಳಿಯ ಮ್ಯಾಲ ಪ್ರೀತಿಯಿದ್ದವಳಿದ್ದರ ನಿಮ್ಮಿಬ್ಬರ ಸಂಸಾರ ನೆಟ್ಟಗಾಗೂದು.

**ಸದಾಶಿವ .**

ನೋಡಬೇಕವ್ವಾ, ಏನೇನಾಗುತ್ತದೋ ! ನನಗಂತೂ ಅವಳನ್ನು ಬಿಟ್ಟು ಬೇರೆಯವರನ್ನು ಮದುವೆಯಾಗಲು ಮನಸ್ಸಿರಲಿಲ್ಲ. ಅದೂ ಅಲ್ಲದೆ ಸರೋಜಳಂಥ ಪಟ್ಟಣದ ಹುಡುಗಿಯರು ಹಳ್ಳಿಗೆ ಬಂದು ಇದ್ದರೆ ಪಟ್ಟಣದ ಸಂಸ್ಕೃತಿ, ನಯ ವಿನಯ ಎಲ್ಲಾ ಸೇರಿ ಹಳ್ಳಿಯೂ ಸುಧಾರಿಸುತ್ತದೆ. ಹಳ್ಳಿ ಪಟ್ಟಣಗಳ ಸಂಸ್ಕೃತಿಗಳ ಮಿಲನದಿಂದ ಒಂದು ಹೊಸ ಸಂಸ್ಕೃತಿಯುಂಟಾಗು ತ್ತದೆ. ಸರೋಜಾ ನನ್ನ ಹಾಗೇ ಹಳ್ಳಿಯ ಬಾಳನ್ನು ಪ್ರೀತಿಸಹತ್ತಿದರೆ ಅಂಥಾ ಹೆಂಡತಿ ಪ್ರಪಂಚದಲ್ಲಿ ಇನ್ನೊಬ್ಬಾಕೆ ಸಿಗಲಿಕ್ಕಿಲ್ಲ.

**ಶಂಕರಪ್ಪ :**

ಹಂಗ ಆಗಬೇಕಲ್ಲ ಮಾರಾಯಾ.

**ಸದಾಶಿವ :**

ಆದೀತು, ಆದೀತು. ಇದಕ್ಕೆಲ್ಲಾ ಬಹಾಳ ತಾಳ್ಮೆ ಬೇಕು.

**ಶಂಕರಪ್ಪ :**

ಮದುವೆಯಾದವ್ವಕ್ಕ ಆಗಲೇ ಎರಡು ತಿಂಗಳಾತಲ್ಲಾ, ಇಲ್ಲಿಯ ತನಕ ಏನಾದರೂ ಬದಲಾಗ್ಯೆತೇನು ಸರೋಜಳಲ್ಲಿ!

**ಸದಾಶಿವ.**

ಇಲ್ಲ. ಇನ್ನೂ ಬದಲಾಗಿಲ್ಲ. ಆದರೂ ನನಗೇನೂ ನಿರಾಶೆಯಾಗಿಲ್ಲ. ಇನ್ನೂ ಒಂದು ವರ್ಷವಾದರೂ ಹೋಗಲಿಕ್ಕೆ ಬೇಕು. ಅವಳು ಪೂರ್ಣ ಬದಲಾಗ ಬೇಕಾದರೆ.

**ಶಂಕರಪ್ಪ :**

ಅಂದರೆ ಈಗಂತೂ ನಿನ್ನ ಸಂಸಾರ ಸುಖದಿಂದ ನಡೆದಿಲ್ಲ ಅನ್ನು.

**ಸದಾಶಿವ :**

ಹೆಂಡತಿಯಾದವಳು ಯಾವಾಗಲೂ ಮುಖ ಸಪ್ಪಗೆ ಮಾಡಿಕೊಂಡು ಕೂತಿದ್ದರೆ ಸಂಸಾರದಲ್ಲಿ ಸುಖ ಹ್ಯಾಗೆ ಕಾಣಬೇಕು ಶಂಕರಪ್ಪ?

**ಶಂಕರಪ್ಪ.**

ಜಗಳ ಗಿಗಳ ಆಗುತ್ತೈತೇನು?

**ಸದಾಶಿವ :**

ಹಾಗೆ ಪ್ರತ್ಯಕ್ಷವಾಗಿ ಜಗಳವೇನೂ ಇಲ್ಲ. ಅವಳಿಗೆ ಚಹಾ ಅಂದರೆ ಬಹಳ ಆಸೆ. ನಾನು ಚಹದ ಮಹಾವೈರಿ. ಹಾಲು ಕುಡೀ ಅಂತ ಅವಳಿಗೂ ಹೇಳಿದೆ. ಅಂದಿನಿಂದ ಹಾಲನ್ನೂ ಅವಳು ಮುಟ್ಟಿಲ್ಲ.

**ಶಂಕರಪ್ಪ :**

(ನಗುತ್ತಾ) ಚಹ?

**ಸದಾಶಿವ :**

ನಿನಗೆ ಬೇಕಾದರೆ ಮಾಡಿಕೊಂಡು ಕುಡಿಯಬಹುದು ಅಂತ ಹೇಳಿದೆ. ಆದರವಳು ಸಿಟ್ಟಿನಿಂದ ಅದನ್ನೂ ಮುಟ್ಟಿಲ್ಲ.

## ಮೂರನೆಯ ಅಂಕ

**ಶಂಕರಪ್ಪ.**

ಚಲೋದು ಆತಲ್ಲಪಾ. ತಂತಾನೇ ಹೋಗಿಬಿಡುತ್ತೈತಲ್ಲಾ ಜಟಾ? ಅಡಿಗೀ ಅದೂ ಚಲೋ ತಾಂಗ ಮಾಡುತಾಳೋ ಇಲ್ಲೋ?

**ಸದಾಶಿವ.**

ಮಾಡುತ್ತಾಳೆ ಸಾಧಾರಣ ಚೆನ್ನಾಗಿಯೇ. ಅದರಲ್ಲೇನೂ ದೋಷ ಇಲ್ಲ. ಮನೆಯನ್ನೂ ಸ್ವಚ್ಛವಾಗಿಡುತ್ತಾಳೆ. ಹೊಲದ ಕೆಲಸ ಮಾತ್ರ ಇನ್ನೂ ಒಗ್ಗಿಲ್ಲ.

**ಶಂಕರಪ್ಪ.**

ಅದೂ ಒಗ್ಗೀತು ಬಿಡು ತಿಂಗಳೊಪ್ಪತ್ತಿನಲ್ಲಿ. ಅಂತೂ ಅವಳೀಗ ಅರ್ಧಕ್ಕರ್ಧ ಬದಲಾದಂಗಾತು. ಇನ್ನು ನ್ಯಾಲ ನೀವಿಬ್ಬರೂ ಚಕ್ಕಂದದಿಂದ ಇರುವಂತಾದರ ಎಲ್ಲಾ ಕೈಗೂಡಿದಂತಾದೀತು.

**ಸದಾಶಿವ:**

ಅದು ಮಾತ್ರ ಇನ್ನೂ ಆಗಲಿಲ್ಲ.

**ಶಂಕರಪ್ಪ.**

ದೊಡ್ಡಪ್ಪನ ಸಂಗಡ ಚಲೋ ರೀತಿಯಿಂದ ನಡಕೊಂಡಾಳ ಹೌದಲ್ಲೋ?

**ಸದಾಶಿವ:**

ಅದರಲ್ಲೇನು ತಕರಾರಿಲ್ಲ. ಅಪ್ಪನೂ ಬಹಳ ಸಮಾಧಾನದಿಂದ ನೋಡಿಕೊಳ್ಳುತ್ತಾನೆ ಅವಳನ್ನು. ಅವಳು ಹೊಲಕ್ಕೆ ಹೋಗುವದಿಲ್ಲ ಅನ್ನುವದೊಂದೇ ಅವನಿಗೆ ಅಸಮಾಧಾನ.

**ಶಂಕರಪ್ಪ:**

ಅದೋ ನೋಡು, ದೊಡ್ಡಪ್ಪನೇ ಬಂದ.

(ಕೈಯಲ್ಲಿ ಕುರುಪಿ ಹಿಡಿದುಕೊಂಡು ಮಹಾಲಿಂಗಪ್ಪ ಬರುವನು)

**ಮಹಾಲಿಂಗಪ್ಪ:**

ಏನಪಾ ಶಂಕರಪ್ಪಾ, ಸಾಲಿ ಬಿಟ್ಟೈತೇನ?

**ಶಂಕರಪ್ಪ :**

ಬಹಾಳ ಹೊತ್ತಾತು. ಹ್ಯಾಂಗಿದ್ದೀಯಪಾ ದೊಡ್ಡಪ್ಪಾ? ಆರಾಮು ಇದ್ದೀಯಾ?

**ಮಹಾಲಿಂಗಪ್ಪ.**

ಹೂಂ. ಇದ್ದೀನಿ ಹೀಂಗ. ಮನಿಗಿ ನೊನಿ ಬಂದರೂ ನಾ ಕಳೆ ತಗೀಲಿಕ್ಕೆ ಹೋಗೂದೇನ ತಪ್ಪಲಿಲ್ಲ.

**ಶಂಕರಪ್ಪ :**

ನೀನಾದರೂ ಯಾಕ ತ್ರಾಸ ಮಾಡಿಕೊಂತೀ ದೊಡ್ಡಪ್ಪಾ? ಬೇಕಾದರ ಆಳು ಹಚ್ಚಿ ಮಾಡಿಕೊಂತಾರ ಕೆಲಸಾ. ಯಾಕೋ ಸದಾಶಿವಾ?

**ಸದಾಶಿವ.**

ನಾನೆಷ್ಟು ಹೇಳಿದರೂ ಇವನು ಕೇಳುವದಿಲ್ಲ ನೋಡಪ್ಪಾ. ವಯಿಸ್ಸಾಯಿತು. ಇವನು ಪೂರಾ ಆರಾಮಾಗಿರಬೇಕು ಈಗ.

**ಮಹಾಲಿಂಗಪ್ಪ :**

ಏನು ಆರಾಮೋ! ಈ ಊರಾಗ ಇರೂತನಕಾ ನನಗ ಆರಾಮು ಸಿಕ್ಕೂ ಹಾಂಗಿಲ್ಲ. ನಾ ಯೂದಕ್ಕ ಮೊದಲು ಕಾಶೀ ನೋಡಿಬರಬೇಕಂತ ಮಾಡಿದ್ದೀನಿ. ರಾಮಾಪುರದ ಚೆನ್ನಯ್ಯಾನೂ ಹೋಗುವವನಿದ್ದಾನ. ಅವನ ನಂಗಡ ಹೋಗಿ ಬರಬೇಕಂತ ಮಾಡೀನಿ ನಾನೂ.

**ಶಂಕರಪ್ಪ :**

ಹಂಗಾದರ ಹೋಗಿ ಬಾರಲ್ಲ ದೊಡ್ಡಪ್ಪಾ?

**ಮಹಾಲಿಂಗಪ್ಪ.**

ಇಂಥಾ ನೊನಿಯು ವ್ಯಾಲ ಹೊಲಾ ಮನೀ ಬಿಟ್ಟು ಹೋಗೂದಂದರ ಮನಸು ಒಪ್ಪೂದಿಲ್ಲಪಾ.

**ಸದಾಶಿವ**

ನೀನೇನು ಚಿಂತೆ ಮಾಡಬೇಡ ಅಪ್ಪಾ. ನಾನೆಲ್ಲಾ ನೋಡಿಕೊಳ್ಳುತ್ತೀನೆ. ನೀನು ಸುಖವಾಗಿ ದೇವರ ದರ್ಶನ ಪಡೆದುಕೊಂಡು ಬಾ.

**ಶಂಕರಪ್ಪ :**

ಸದಾಶಿವನನಂದರೇನು ಕೈಲಾಗದವನಂತ ತಿಳಿದಿದ್ದೀಯೇನು ದೊಡ್ಡಪ್ಪಾ ?

**ಮಹಾಲಿಂಗಪ್ಪ :**

ಕೈಲಾಗದವ ಯಾಕಾದಾನು ಬಿಡು. ಆದರು ಇವಗ ತಕ್ಕ ಹೆಂಡತಿ ಸಿಗಲಿಲ್ಲ ಅನ್ನೂದು ಚಿಂತಿ ನನಗ. ಆ ಚೆನ್ನಪ್ಪನ್ನ ಮಾಡಿದ್ದರ ಬಹಾಳ ಚಲೋ ಆಗುತ್ತಿತ್ತು.

**ಶಂಕರಪ್ಪ :**

ಇದಕ್ಕೆಲ್ಲ ಋಣಾನುಬಂಧ ಬೇಕು ದೊಡ್ಡಪ್ಪಾ.

**ಮಹಾಲಿಂಗಪ್ಪ :**

ಹೂಂ. ಅದೂ ಖರೇನು. ಆತು ನಾನೀಗ ನಡೀತೀನಿ ಮನೀಗೆ. ನೀ ಬರೂದಿಲ್ಲೇನು ಸದಾಶಿವ ?

**ಸದಾಶಿವ :**

ನಡೆಯಪ್ಪಾ.

(ತಂದೆ ಮಕ್ಕಳು ಬಲಗಡೆ, ಶಂಕರಪ್ಪ ಎಡಗಡೆ ಹೋಗುತ್ತಿದ್ದ ಹಾಗೆ ತೆರೆ ಬೀಳುವುದು)

## ದೃಶ್ಯ ಎರಡು

[ಸದಾಶಿವನ ಮನೆಯ ಪಡಸಾಲೆ. ಬಲಗಡೆಗೊಂದು ವಿರಾಮಕುರ್ಚಿಯಿದೆ. ಕೈಯಲ್ಲಿ ಕಾಗದವೊಂದನ್ನು ಹಿಡಿದುಕೊಂಡು ಓದುತ್ತಾ ಸರೋಜ ಅಡ್ಡಾಡುತ್ತಿದ್ದಾಳೆ. ಈಗ ಆಕೆ ಪುನಃ ಬಿಳಿಸೀರೆಯಲ್ಲಿದ್ದಾಳೆ. ತಲೆಯನ್ನು ಚೆನ್ನಾಗಿ ಬಾಚಿ ಹೂ ಮುಡಿದಿದ್ದಾಳೆ.]

(ಎಡಗಡೆಯಿಂದ ಸದಾಶಿವ ಬರುವನು)

**ಸದಾಶಿವ :**

ಓಹೊ ! ಏನು ಇವತ್ತು ಬಹಳ ಸಂತೋಷದಲ್ಲಿರುವ ಹಾಗಿದೆಯಲ್ಲಾ ! ಯಾರ ಪತ್ರ ಸರೋಜಾ ?

(ಸರೋಜಳು ಪತ್ರವನ್ನು ಮಡಿಚಿ ಮೌನವಾಗಿರುವಳು)

## ಮೂರನೆಯ ಅಂಕ

**ಸದಾಶಿವ :**

(ಅವಳ ಬಳಿ ಬಂದು) ಮತ್ತೆ ಆರಂಭವಾಯಿತೇನು ಮೌನವ್ರತಕ್ಕೆ ?

(ಅವಳು ಮತ್ತೆ ಮೌನ)

**ಸದಾಶಿವ :**

**– ಗೀತೆ -**

**ಮೌನವೇಕೆ, ಮೋಹದ ಗಿಣಿಯೆ, ಮಾತನಾಡು ಬಾರ !**
**ಕೋಪವೇಕೆ, ಮುದ್ದಿನ ಕಣಿಯೆ, ಪ್ರೇಮರಾಗ ತೋರ !**
**ಭಾವ ಬೇಸರಾ !**
**ಜೀವ ಕಾತರಾ !**
**ತಾಳಲಾರೆ ಮಾನಸದುರಿಯಾ, ಪ್ರೀತಿನೀರ ತಾರ !**

**ಸದಾಶಿವ :**

ನೀನು ಮಾತಾಡದೆ ಸುಮ್ಮನಿರುವದರಿಂದ ನನಗೆಂಥ ಸಂಕಟವಾಗುತ್ತದೆನ್ನುವದು ನಿನಗೆ ತಿಳಿಯದೇ ಸರೋಜಾ ? ಅಪ್ಪನೂ ಕಾಶಿಗೆ ಹೊರಟುಹೋದ. ಮನೆಯಲ್ಲಿ ನನ್ನನ್ನು ನಿನ್ನನ್ನು ಬಿಟ್ಟರೆ ಬೇರೊಂದು ಜೀವವಿಲ್ಲ. ನಾವಿಬ್ಬರೂ ಮಾತು ಬಿಟ್ಟು ಮೌನ ವಹಿಸಿದರೆ ಈ ಮನೆ ನರಕವಾಗದಿದ್ದೀತೇ ?

**ಸರೋಜ :**

(ಬಿಗುಪಿನ ದನಿಯಿಂದ) ನರಕ ! ಮೊದಲಿನಿಂದ ಇದ್ದೇ ಇದೆಯಲ್ಲ ನರಕ ! ಈಗ ಹೊಸದಾಗಿ ಆಗಬೇಕಾದ್ದೇನಿದೆ ?

**ಸದಾಶಿವ .**

(ಕುರ್ಚಿಯಲ್ಲಿ ಕುಸಿದು ಕುಳಿತು) ಅಂತೂ ನನ್ನ ಮನೆ ಅಂದರೆ ನರಕದ ಹಾಗಾಯಿತಲ್ಲವೇ ನಿನಗೆ !

**ಸರೋಜ :**

ಮನೆಯಷ್ಟೇ ಅಲ್ಲ, ಈ ಊರು, ಈ ಗುಡ್ಡ, ಈ ಭೂಮಿ ಎಲ್ಲಾ ನರಕವನ್ನೇ ನೆನಪು ಮಾಡುತ್ತವೆ.

**ಸದಾಶಿವ :**

(ಕುರ್ಚಿಯಿಂದೆದ್ದು ಪಡಸಾಲೆಯಲ್ಲಿ ಅಡಿಯಿಡುತ್ತಾ) ಆಯ್ತು. ಇದು ನರಕದ ಹಾಗೇ ಇದೆಯಂತ ತಿಳಿಯೋಣ. ನಾನು ನೀನು ಸೇರಿ ಇದನ್ನು ಸ್ವರ್ಗದ ಹಾಗೆ ಮಾಡಬಾರದೇಕೆ?

(ಸರೋಜ ಮತ್ತೆ ಮೌನ)

**ಸದಾಶಿವ :**

ಮಾತಾಡು ಸರೋಜಾ, ಹೀಗೆ ಕ್ಷಣಕ್ಷಣಕ್ಕೆ ಮೌನ ತಳೆದರೆ ಹ್ಯಾಗೆ? ಮೊದಲು ಮಾತಾಡುವದಕ್ಕಾರಂಭಿಸಿದರೆ ನನಗೂ ಕೂಡಾ ಮಾತಾಡಲು ಬಿಡದೆ ಎಲ್ಲಾ ನೀನೇ ಆಡುತ್ತಿದ್ದೆ. ಈಗಲಾದರೋ ನಾನೇ ನಿನ್ನ ಕೆಣಕಿ ಕೆಣಕಿ ಮಾತಾಡಿಸಬೇಕು. ಆದರೂ ನೀನು ತುಟಿ ಬಿಚ್ಚುವದು ಅಪರೂಪ. ಏನೋ ಒತ್ತಾಯಕ್ಕೆ ಮಾತಾಡುವವರ ಹಾಗೆ 'ಹೂಂ – ಇಲ್ಲ' ಅಂದು ಬಿಟ್ಟು ಸುಮ್ಮನಾಗುತ್ತೀಯ. ಅಲ್ಲಾ, ನಿನಗೇನಾಯಿತು ಅಂತ ಸೋಜಿಗ ನನಗೆ. (ಅವಳ ಕೈಹಿಡಿದು ಕಳವಳದಿಂದ) ಹೇಳು ಸರೋಜಾ, ಏನಾಯಿತು ನಿನಗೆ? ನಾನೇನಾದರೂ ತಪ್ಪು ಮಾಡಿದೆನೇ? ಅನ್ನಬಾರದ ಮಾತನ್ನು ಅಂದೆನೇ? ಏನಾಯಿತು? (ಅವಳು ಉತ್ತರನೀಯುವುದಿಲ್ಲ) ನಿನಗೆ ಬೇಕಾದರೆ ನೀನು ಚಹ ಕುಡಿಯಬಹುದು. ಹಾಗೆ ತಿಂಡಿ ತೀರ್ಥಗಳಿಗೆಲ್ಲ ಅಡ್ಡಿ ಮಾಡುವವನಲ್ಲ ನಾನು.

**ಸರೋಜ :**

(ಸೆಡವಿನಿಂದ) ನಿಮ್ಮ ಚಹವೂ ಬೇಡಾ, ಏನೂ ಬೇಡಾ.

**ಸದಾಶಿವ :**

(ಮುಗುಳ್ನಗುತ್ತಾ) ನಾನಾದರೂ ಬೇಕೋ ಬೇಡವೋ?

**ಸರೋಜ :**

ಬೇಡ ಅಂದರೆ ಬಿಡುತ್ತೀರೇನು ನೀವು? ಮದುವೆ ಮಾಡಿಕೊಂಡ ತಪ್ಪಿಗೆ. .

**ಸದಾಶಿವ :**

(ನೊಂದು) ಅಂತೂ ಮದುವೆಯಾದದ್ದು ತಪ್ಪಾಯಿತಂತ ನಿನ್ನ ಭಾವನೆ ಅಲ್ಲವೆ?

**ಸರೋಜ :**

ಆ ಹಾಳು ನರಕದಿಂದ ಪಾರಾಗಿ ಈ ಹಾಳು ನರಕಕ್ಕೆ ಬರುವದು ನನ್ನ ಹಣೆಯಲ್ಲಿ ಬರೆದಿತ್ತು. ಯಾರೇನು ಮಾಡುವದು?

**ಸದಾಶಿವ :**

ಯಾಕೆ? ನಿನಗಿಲ್ಲಿ ಏನು ತೊಂದರೆ ಬಂದಿದೆ?

(ಅವಳು ಮತ್ತೆ ಮೌನ)

**ಸದಾಶಿವ :**

ನನ್ನ ಬಗ್ಗೆ ಸ್ವಲ್ಪ ಕೂಡಾ ಪ್ರೀತಿಯಿಲ್ಲವೇ ನಿನ್ನಲ್ಲಿ ಸರೋಜಾ!

**ಸರೋಜ :**

ನಿಮಗೇ ಗೊತ್ತು ಅದೆಲ್ಲಾ.

**ಸದಾಶಿವ :**

ನನಗೇ ಗೊತ್ತು. ನಿಜ. ನನಗೇ ಗೊತ್ತು. ನಾನು ನಿನ್ನನ್ನು ಅತಿಶಯವಾಗಿ ಪ್ರೀತಿಸುವೆನೆಂದು ನನಗೆ ಗೊತ್ತು. ನೀನೂ ನನ್ನನ್ನು ಪ್ರೀತಿಸುತ್ತೀಯಂತಲೇ ತಿಳಿದು ನಾನು ನಿನ್ನನ್ನು ಮದುವೆಯಾದದ್ದು.

**ಸರೋಜ :**

ಮದುವೆಯಾದದ್ದಂತೂ ಆಯಿತಲ್ಲ. ನಿಮ್ಮ ಮನೆಯ ಕಸ ಮುಸುರೆ ನೋಡಿಕೊಂಡು ನಿಮಗೆ ಅಡಿಗೆಮಾಡಿ ಹಾಕುತ್ತಿಲ್ಲವೇನು ನಾನು?

**ಸದಾಶಿವ :**

ಅಷ್ಟಾದರಾಯಿತೇನೇ?

**ಸರೋಜ :**

ಅಷ್ಟಕ್ಕಾಗಿಯೇ ನಾನು ನಿಮ್ಮನ್ನು ಮದುವೆಯಾದದ್ದು.

**ಸದಾಶಿವ :**

ಇನ್ನೇನೂ ಬೇಡವೆ?

**ಸರೋಜ :**

ನಾನು ಮಾಡುವ ಕೆಲಸಕ್ಕೆಂದು ನನಗಿಲ್ಲಿ ಆಸರೆ ಕೊಟ್ಟಿದ್ದೀರಿ, ಎರಡು

ವೇಳೆ ಊಟ ಕೊಡುತ್ತಿದ್ದೀರಿ, ಉಡಲು ಅರಿವೆ ಕೊಡುತ್ತಿದ್ದೀರಿ. ಇನ್ನೇನೂ ಬೇಡ ನನಗೆ.

**ಸದಾಶಿವ :**

ನೀನೆಂದರೆ ಒಬ್ಬ ಕೆಲಸದ ಆಳೆಂದು ತಿಳಿದಿದ್ದೀಯಾ ಸರೋಜಾ?

**ಸರೋಜ :**

ಆಳಿನಂತೆ ಇರಬೇಕೆಂತಲೇ ಮದುವೆಯಾದದ್ದು ನಾನು.

**ಸದಾಶಿವ :**

ನೀನೆಂದೂ ದಾಸಿಯಾಗಲಾರೆ ಸರೋಜಾ. ನೀನು ರಾಣಿ. ಈ ಮನೆಯ ರಾಣಿ.

**ಸದಾಶಿವ :**

**– ಗೀತೆ –**

**ನೀನು ಈ ಮನೆಯ ರಾಣಿ, ನಾನೆ ರಾಜಾ!**
**ನಾನೂ ನೀನೂ ಸೇರಿ ಹಾಲುಜೇನಿನ ಹಾಗೆ**
**ಸಂಸಾರ ಮಾಡುವ ಸರೋಜಾ** ।೧।

**ನಾನು ಈ ಮನೆಯ ಚಂದ್ರ, ನೀನೆ ತಾರಾ**
**ನಾನು ನೀನೂ ಸೇರಿ ಬೆಳ್ಳಿನಾವೆಯನೇರಿ**
**ಸಂಸಾರ ಮಾಡುವ ಸರೋಜಾ** ।೨।

**ಸರೋಜ :**

ನಾಕು ಬಿಡಿರಿ. ನಾನೆಲ್ಲಾ ಬಲ್ಲೆ ಇಂಥ ಬಣ್ಣದ ಮಾತು.

**ಸದಾಶಿವ :**

ಇದರಲ್ಲಿ ಬಣ್ಣವೆಲ್ಲಿಂದ ಬಂತು? ನಾನು ಗಂಡ, ನೀನು ಹೆಂಡತಿ ಎಂಬ ವಿಚಾರ ಇನ್ನೂ ನಿನ್ನಲ್ಲಿ ಬರಲಿಲ್ಲವಲ್ಲ!

**ಸರೋಜ :**

ಏನು ಗಂಡನೋ, ಏನು ಹೆಂಡತಿಯೋ! ನಿಮ್ಮ ಮನೆಯ ಕೆಲಸಗಳಲ್ಲಿ ನಾನೇನು ಸೋಮಾರಿತನ ಮಾಡಿಲ್ಲವಲ್ಲ.

**ಸದಾಶಿವ :**

ಮದುವೆಯಾಗುವದು ಇಷ್ಟಕ್ಕೇ ಅಂತ ತಿಳಿದಿದ್ದೀಯಾ?

**ಸರೋಜ :**

ಏನೋ.

**ಸದಾಶಿವ :**

ಇಷ್ಟೇ ನಿನ್ನ ಕೆಲಸ ಅಂತ ಹೇಳಿದವರು ಯಾರು? ನೀನು ಇನ್ನೂ ನಿನ್ನ ಹಟ ಬಿಡಲಿಲ್ಲ. ನನಗೂ ಸಹಿಸಿ ಸಹಿಸಿ ಸಾಕಾಗಿಹೋಯಿತು. ನನಗೆ ಸಿಟ್ಟು ಬಂತು ಅಂದರೆ....

**ಸರೋಜ :**

ಏನು ಮಾಡುತ್ತೀರಿ? ಹೊಡೆಯುತ್ತೀರಾ?

**ಸದಾಶಿವ :**

ಎಷ್ಟಾದರೂ ಗಂಡಸು ಹೆಂಗಸಿಗಿಂತ ಹೆಚ್ಚು ಶಕ್ತಿವಂತ ಅನ್ನುವದನ್ನ ಮರೆಯಬೇಡ.

**ಸರೋಜ :**

ನಿಮ್ಮ ಶಕ್ತಿಯನ್ನು ನನ್ನ ಮೇಲೆ ಪ್ರಯೋಗಿಸುವ ವಿಚಾರವಿದೆಯೋ ಏನು? ಹೆಂಗಸನ್ನು ಹೊಡೆಯುವದು ಎಂಥಾ ಗಂಡಸುತನ!

**ಸದಾಶಿವ :**

ಹೆಂಗಸು ಮೂರ್ಖತನ ಮಾಡಿದರೆ ಗಂಡನು ಹೊಡೆದಾದರೂ ಬುದ್ಧಿ ಕಲಿಸಬೇಕಾಗುತ್ತದೆ.

**ಸರೋಜ :**

ಹೊಡೆದು ನೋಡಿರಿ. ಆ ಮೇಲೆ ತಿಳಿಯುತ್ತದೆ.

**ಸದಾಶಿವ :**

ಏನು ಮಾಡುವವಳೇ ನೀನು?

**ಸರೋಜ :**

ನೆಟ್ಟಗೆ ಪೋಲೀಸ ಸ್ಟೇಶನ್ನಿಗೆ ಹೋಗಿ ಕಂಪ್ಲೇಂಟ್ ಕೊಡುತ್ತೇನೆ.

**ಸದಾಶಿವ :**

(ನಗುತ್ತಾ) ಪೋಲೀಸಿಗೆ ಕಂಪ್ಲೇಂಟು! (ಮತ್ತೆ ನಗುತ್ತಾ) ನಿನಗೆ ತಿಳುವಳಿಕೆ ಕಡಿಮೆ ಅಂತ ನಾ ಹೇಳುವದು ಸುಳ್ಳು ಸುಳ್ಳೇ ಅಲ್ಲ. ಇಲ್ಲೆಲ್ಲಿದೆ ಪೋಲೀಸ ಸ್ಟೇಶನ್ನು? ಇದೇನು ಪಟ್ಟಣವೇ? ಒಂದು ವೇಳೆ ನೀನು ಕಂಪ್ಲೇಂಟ್ ಕೊಟ್ಟರೂ ನಿನ್ನ ಕಡೆ ಸಾಕ್ಷಿ ಹೇಳುವವರ್ಯಾರು? ನನ್ನ ವಿರುದ್ಧವಾಗಿ ಈ ಊರಲ್ಲಿ ಯಾರೂ ಏನೂ ಹೇಳಲಾರರು.

**ಸರೋಜ.**

ಈ ಹಾಳು ಊರಿನ ಸಹವಾಸವೇ ಬೇಡ. ನಾನು ಪಟ್ಟಣಕ್ಕೇ ಹೋಗಿ ಬಿಡುತ್ತೇನೆ.

**ಸದಾಶಿವ :**

ಅಲ್ಲಿಯಾದರೂ ನಿನಗೆ ಆಶ್ರಯ ಎಲ್ಲಿ ಸಿಕ್ಕೀತು? ಮತ್ತೆ ನೀನು ನನ್ನ ಹತ್ತಿರವೇ ಓಡಿಬರಬೇಕಾಗುವದು.

**ಸರೋಜ :**

ಆ ಕಾಲ ಆಗಿ ಹೋಯಿತು. ಈಗ ನನಗೂ ಒಂದು ಒಳ್ಳೆಯ ಕಾಲ ಬಂದಿದೆ. (ಪತ್ರವನ್ನು ತೋರಿಸುತ್ತ) ಕಡೆಗೂ ನನಗೊಂದು ಕೆಲಸ ಸಿಕ್ಕಿದೆ. ಕೂಡಲೇ ಹೊರಟು ಬಾ ಅಂತ ಶಾಂತಣ್ಣನವರು ಬರೆದಿದ್ದಾರೆ.

**ಸದಾಶಿವ.**

(ಮತ್ತೆ ನಗುತ್ತಾ) ಶಾಂತಣ್ಣ ಬರೆದಿದ್ದಾರೆ ಹೌದಲ್ಲೋ! ಅವರು ಬರೆದರು, ನೀನು ಹೊರಟೆ. ಅಲ್ಲಿ ಹೋಗಿ ಉದ್ಧಾರವಾಗಿ ಬರುತ್ತೀ ಅಷ್ಟೆ.

**ಸರೋಜ :**

ನಾನು ಏನಾದರೂ ಹಾಳು ಬಾವಿ ಬಿದ್ದರೂ ನಿಮಗೇನು?

**ಸದಾಶಿವ :**

ನನಗೇನು! ಒಳ್ಳೆಯ ಮಾತೇ ನಿನ್ನದೂ! ಮೊದಲಿನಂತೆ ನೀನೀಗ ಪರಕೀಯಳಲ್ಲ ನನಗೆ. ಸಮಾಜದೆದುರಿನಲ್ಲಿ ನಿನ್ನ ಕೈಹಿಡಿದು, ನಿನ್ನ ಕೊರಳಲ್ಲಿ ಮಂಗಲಸೂತ್ರ ಕಟ್ಟಿ ಕೊನೆಯವರೆಗೂ ನಿನ್ನನ್ನು ಕಾಪಾಡುವದಾಗಿ

ಪ್ರತಿಜ್ಞೆ ಮಾಡಿದ್ದೇನೆ. ನಿನ್ನನ್ನು ನೋಡಿಕೊಳ್ಳುವ ಜವಾಬ್ದಾರಿ ನನ್ನದು, ತಿಳಿಯಿತೇ! (ಅವಳ ಕೈಹಿಡಿಯುವನು)

**ಸರೋಜ :**

(ಮುನಿಸಿನಿಂದ) ಸಾಕು, ಸಾಕು, ಕೈಬಿಡಿರಿ ನನ್ನದು!

**ಸದಾಶಿವ :**

ಇಲ್ಲ. ಬಿಡುವದಿಲ್ಲ.

**ಸರೋಜ :**

(ಎಳೆದಾಡುತ್ತ) ಬಿಡಿರಿ. ಬಿಡಿರಿ. ಬಿಡಿರೀ ಅಂದೆ.
(ಪರಚುವಳು)

**ಸದಾಶಿವ :**

(ಕೈಬಿಟ್ಟು) ಪರಚುವುದನ್ನು ಬೇರೆ ಕಲಿತಿದ್ದೀಯಲ್ಲ. ಪಟ್ಟಣದ ಹುಡುಗಿಯರೆಲ್ಲಾ ನಿನ್ನಂತೇ ಪರಚುತ್ತಾರೋ ಏನೊ – ಮಂಗಗಳ ಹಾಗೆ. ಏನು ಉಗುರುಗಳಪ್ಪಾ ಇವು.... ಬೆಕ್ಕಿನ ಹಾಗೆ ...

**ಸರೋಜ :**

ನನ್ನ ಮೇಲೆ ಕೈಮಾಡುತ್ತೀರಲ್ಲಾ ಮತ್ತೆ!

**ಸದಾಶಿವ :**

ಕೈಬಿಡಿಸಿಕೊಳ್ಳುವ ನೆಪಮಾಡಿ ಪರಚುತ್ತೀಯಲ್ಲಾ ಮತ್ತೆ!

**ಸರೋಜ :**

ಮನುಷ್ಯತ್ವ ಏನೇನೂ ಇಲ್ಲ ನಿಮ್ಮಲ್ಲಿ. ನೀವೊಂದು ಪಶು.

**ಸದಾಶಿವ :**

ಪಶು ನೀನು. ಹೀಗೆಲ್ಲ ಪರಚಿದವಳು.

**ಸರೋಜ :**

ನೀವೊಂದು ರಾಕ್ಷಸ!

**ಸದಾಶಿವ :**

ನೀನೊಬ್ಬ ರಾಕ್ಷಸಿ! ನಿನಗೆ ಜೋಕು ಬಡಿತ! (ಕೋಪ ನಟಿಸುತ್ತ ಅವಳನ್ನು ಹಿಡಿಯುವನು)

**ಸರೋಜ :**

(ಕೂಗಿಕೊಂಡು) ಅಯ್ಯೋ! ಅಯ್ಯಯ್ಯೋ! ಹೊಡೆಯಬೇಡಿ, ಹೊಡೆಯ ಬೇಡಿ.

**ಸದಾಶಿವ :**

ನೀನು ನಿನ್ನ ನಡತೆಯನ್ನು ಸುಧಾರಿಸಿಕೊಳ್ಳದಿದ್ದರೆ ಹೊಡೆಯದೆ ಬಿಡುವದಿಲ್ಲ.

**ಸರೋಜ :**

ನಾನೇನು ಮಾಡಬೇಕೆನ್ನುತ್ತೀರಿ ?

**ಸದಾಶಿವ :**

ಏನು ಮಾಡಬೇಕೆಂದರೆ, ನಾನು ಹೇಳಿದಂತೆ ಕೇಳಬೇಕು. ನಾನು ನಿನ್ನ ಗಂಡ ಅನ್ನುವದನ್ನು ಯಾವಾಗಲೂ ನೆನಪಿಟ್ಟುಕೊಂಡಿರಬೇಕು. ನನ್ನ ಸಂಗಡ ನಗುತ್ತಾ ಕೆಲೆಯುತ್ತಾ ಇರಬೇಕು. ಯಾವಾಗಲೂ ಮನೆಯಲ್ಲೇ ಕೂತುಕೊಂಡಿರಬಾರದು. ಹೊಲಕ್ಕೆ ಬಂದು ದುಡಿಯಬೇಕು. ಇಲ್ಲದಿದ್ದರೆ ಬಾರುಕೋಲು ಪೆಟ್ಟು ಬೀಳುತ್ತದೆ. ತಿಳಿಯಿತೇನು? ಹೂಂ. ವೇಳೆ ಯಾಯಿತು, ಒಲೆಗೆ ಉರಿ ಹಚ್ಚು. ನಾನು ಮೇವು ಮಾಡಿಕೊಂಡು ಬರುತ್ತೇನೆ

(ಹೋಗುವನು. ಅವಳು ನೆಲಕ್ಕೆ ಕುಸಿದು, ಮೊಳಕಾಲುಗಳಲ್ಲಿ ತಲೆ ಹಾಕಿಕೊಂಡು ಕೂಡುವಳು. ಒಂದು ನಿಮಿಷದ ತರುವಾಯ ಚಂಪಾವತಿ ಬರುವಳು.)

**ಚಂಪಾವತಿ :**

ಸರೋಜಾ, ಸರೋಜಾ !

(ಸರೋಜ ಬೆಚ್ಚಿ, ಎದ್ದು ಕೂದಲು ಸಾವರಿಸಿಕೊಳ್ಳುತ್ತ ಗೆಳತಿಯನ್ನು ದಿಟ್ಟಿಸುವಳು. ಚಂಪಾವತಿ ಮುಂದೆ ಬಂದು ಸರೋಜಳನ್ನು ತಬ್ಬಿಕೊಂಡು)

**ಚಂಪಾವತಿ :**

ಎಷ್ಟು ಸೊರಗಿ ಹೋಗಿದ್ದೀಯೆಲ್ಲೇ ? ಏನಾಯಿತೇ ನಿನಗೆ ?

**ಸರೋಜ:**

ಆಗಬೇಕಾದ್ದೆಲ್ಲಾ ಆಗಿಹೋಯಿತು. ಇನ್ನು ನಾವು ಬರುವುದೊಂದು ಉಳಿಯಿತು.

**ಚಂಪಾವತಿ.**

ಛೀ ಹುಚ್ಚೀ! ನಾವು ಯಾಕೆ ಬಯಸುತ್ತೀ? ಸಾಯುವ ವಯಸ್ಸೆ ನಿನ್ನದು? ಮೊನ್ನೆ ಮೊನ್ನೆ ಮದುವೆಯಾಗಿದೆ.

**ಸರೋಜ.**

ಹೂಂ. ಮದುವೆಯಾಗಿದೆ, ನನ್ನ ಪ್ರಾಣ ಹಿಂಡಲಿಕ್ಕೆ.

**ಚಂಪಾವತಿ.**

ನನಗೂ ಸಂಶಯವಿತ್ತು ನಿನ್ನ ಸಂಸಾರದ ಬಗ್ಗೆ. ನಿನಗೀಗಲೆ ಮದುವೆಯಾಗುವ ಇಚ್ಛೆಯಿರಲಿಲ್ಲ. ಆದರೂ ಆಗಬೇಕಾಗಿ ಬಂತು. ಏನು ಮಾಡುವುದು ಸರೋಜಾ! ಬಸ್ಸು ಇಳಿದು ನಿಮ್ಮ ಮನೆ ಹುಡುಕುತ್ತಾ ಬರುತ್ತಿದ್ದ ಹಾಗೆ ಹಾದಿಯಲ್ಲಿ ಸದಾಶಿವ ಭೆಟ್ಟಿಯಾದವರು ನನ್ನ ಹತ್ತಿರ ಸರಿಯಾಗಿ ಮಾತೂ ಆಡದೆ ಬಿರುಬಿರನೆ ಹೋಗಿಬಿಟ್ಟರು. ಏನು, ಇಲ್ಲಿ ಜಗಳ ಮಾಡಿಕೊಂಡೇ ಹೋದರೇ ಏನು?

**ಸರೋಜ.**

ಜಗಳಕ್ಕೇನು ಬಿಡು, ಇದ್ದೇ ಇರುತ್ತದೆ ದಿನಾಲೂ. ಹೋಗಲಿ ಅದೆಲ್ಲಾ. ಕೈಕಾಲು ತೊಳೆದುಕೋ ಬಾ. ಹೇಳದೆ ಕೇಳದೆ, ಒಂದು ಸುದ್ದಿಯನ್ನೂ ತಿಳಿಸದೆ ಬಂದುಬಿಟ್ಟೆಯಲ್ಲಾ!

**ಚಂಪಾವತಿ:**

ಬಹಳ ದಿನಗಳಿಂದ ಬರಬೇಕು ಬರಬೇಕು ಅಂತ ಇದ್ದೆ. ರಜಾ ಸಿಕ್ಕದೆ ಬರಲಿಕ್ಕಾಗಿರಲಿಲ್ಲ. ಈ ದಿನ ಮಾತ್ರ ಜರೂರಾಗಿ ಬರಲೇಬೇಕಾದ ಪ್ರಸಂಗ ಬಂತು.

**ಸರೋಜ:**

(ಆತುರತೆಯಿಂದ) ಏನು? ಅಂಥಾದ್ದೇನು? ನನಗೆ ನೌಕರಿ ಸಿಕ್ಕಿದೆ ಅಂತ

ಶಾಂತಣ್ಣನವರು ಬರೆದಿದ್ದಾರೆ. ನನ್ನನ್ನು ಕರೆದೊಯ್ಯಲು ಬಂದಿಲ್ಲವಷ್ಟೇ ನೀನು ?

**ಚಂಪಾವತಿ :**

ಕರೆದೊಯ್ಯಲು ಬಂದಿಲ್ಲ. ಅಲ್ಲಿಗೆ ಬರಬಾರದೆಂದು ನಿನಗೆ ತಿಳಿಸಿ ಹೋಗಲು ಬಂದಿದ್ದೇನೆ.

**ಸರೋಜ :**

ಯಾಕೆ ? ನಾನು ಬಂದರೆ ನಿನಗೇನು ಹಾನಿ ?

**ಚಂಪಾವತಿ :**

ಹಾನಿಯಷ್ಟೇ ಅಲ್ಲ, ನನ್ನ ಸರ್ವನಾಶವಾಗುತ್ತದೆ. ನನ್ನ ಸಂಗಡ ನೀನೂ ಹಾಳಾಗುತ್ತೀ.

**ಸರೋಜ .**

ನಾನಾದರೂ ಯಾಕೆ ಹಾಳಾಗಬೇಕು ? ನೀನಾದರೂ ಯಾಕೆ ಹಾಳಾಗಬೇಕು ?

**ಚಂಪಾವತಿ :**

ಯಾಕೆ ಅಂದರೆ....ಅದಕ್ಕೇ... ಅದಕ್ಕೇ... ಶಾಂತಣ್ಣನವರು ನಿನಗೆ ಪತ್ರ ಬರೆದ ಸುದ್ದಿ ನನಗಿಂದೇ ಗೊತ್ತಾಯಿತು. ಎರಡು ಮೂರು ತಿಂಗಳಿಂದ ಅವರಿಗೂ ನನಗೂ ನೆಟ್ಟಗಿಲ್ಲ. ಸ್ಕೂಲ್‌ಬೋರ್ಡ್ ಚೇರ್ಮನ್ನರಿಗೆ ಚಾಡಿ ಹೇಳಿ ಇವರೇ ನನ್ನನ್ನು ಸಸ್ಪೆಂಡ್ ಮಾಡಿಸಿದ್ದಾರೆ. ಈಗ ನನ್ನ ಜಾಗಕ್ಕೇ ನಿನ್ನನ್ನು ನೇಮಿಸುವ ವಿಚಾರ ನಡೆದಿದೆ.

**ಸರೋಜ .**

ಇದೊಂದೂ ಗೊತ್ತಿರಲಿಲ್ಲವಲ್ಲ ನನಗೆ! ನಿನ್ನನ್ನು ಸಸ್ಪೆಂಡ್ ಮಾಡಲು ಕಾರಣವೇನಾಯಿತು ?

**ಚಂಪಾವತಿ :**

ಒಂದು ತಿಂಗಳ ಹಿಂದೆ ಮೈಯಲ್ಲಿ ಜ್ವರ ಬಂದಿತ್ತು. ಹತ್ತು ಹದಿನೈದು ದಿನ ಶಾಲೆಗೆ ಹೋಗಲಾಗಲಿಲ್ಲ. ಹೆಡ್‌ಮಾಸ್ತರರಿಗೆ ನನ್ನ ಕಂಡರಾಗದು.

ನನಗವಳು ರಜಾ ಕೊಡಲಿಲ್ಲ. ಮೈಯಲ್ಲಿ ಜ್ವರವಿದ್ದಾಗ ನಾನು ಸಾಲೆಗೆ ಹೋಗುವದಾದರೂ ಹ್ಯಾಗೆ? ಏನಾಗುತ್ತದೋ ಆಗಲಿ ಅಂತ ನಾನೂ ಮನೆಯಲ್ಲೇ ಇದ್ದುಬಿಟ್ಟೆ, ಬಂತು ಸಸ್ಪೆಂಡ್ ಆರ್ಡರು. ನನಗೆ ಜ್ವರ ಬಂದದ್ದು ಸುಳ್ಳು ಅಂತ ಶಾಂತಣ್ಣನವರೇ ಹೇಳಿದರಂತೆ ಚೇರ್ಮನ್ನರಿಗೆ.

**ಸರೋಜ :**

ಅವರು ನಿನ್ನ ವಿರುದ್ಧ ಹೇಳಲು ಕಾರಣವಾದರೂ ಏನು?

**ಚಂಪಾವತಿ :**

ಅವೊತ್ತು ನಿನ್ನ ಸಂಗಡ ಅಧಿಕ ಪ್ರಸಂಗ ಮಾಡಿದ್ದರಲ್ಲಾ ಅವರು. ನಿನ್ನಿಂದ ಆ ಸುದ್ದಿ ತಿಳಿದ ಬಳಿಕ ನಾನು ಸಿಟ್ಟಿಗೆದ್ದು ಅವರನ್ನು ಮನಸ್ಸಿಗೆ ಬಂದ ಹಾಗೆ ಬಯ್ದಿದ್ದೆ. ಅಂದಿನಿಂದಲೂ ನನ್ನ ಮೇಲೆ ಕತ್ತಿ ಮಸೆಯುತ್ತಿದ್ದಾರೆ.

**ಸರೋಜ .**

ಈಗಲೂ ನಿಮ್ಮ ಸಂಬಂಧವಿದೆಯೋ ಇಲ್ಲವೋ?

**ಚಂಪಾವತಿ :**

ಏನೋ ಯಾವಾಗಲಾದರೊಮ್ಮೆ ಬರುತ್ತಿರುತ್ತಾರೆ ಮನಸ್ಸು ಬಂದಾಗ. ಒಂದಿಲ್ಲೊಂದು ದಿನ ನನ್ನ ಹಾಗೆ ನಿನ್ನನ್ನೂ ಇಟ್ಟುಕೊಳ್ಳದೆ ಬಿಡುವದಿಲ್ಲ ಅಂತ ಬಡಾಯಿ ಕೊಚ್ಚುತ್ತಿರುತ್ತಾರೆ.

**ಸರೋಜ :**

ನನ್ನನ್ನೂ ಇಟ್ಟುಕೊಳ್ಳುತ್ತಾರಂತೇನು? ಅವರ ತಲೆಯೊಳಗಿನ ಆ ಹುಚ್ಚು ಆಗಲೆ ಇಳಿದುಹೋಗಿರಬಹುದೆಂದು ನಾನು ತಿಳಿದುಕೊಂಡಿದ್ದೆ. ಕಪಾಳಿಗೆ ಹೊಡೆದು ಕಳಿಸಿದರೂ ಅವರ ದುರ್ಬುದ್ಧಿ ಹೋಗಲಿಲ್ಲಾ ಅನ್ನು, ಏನೋ, ಅವರಿಗೀಗ ಪಶ್ಚಾತ್ತಾಪವಾಗಿರಬಹುದು, ಅದಕ್ಕೇ ನನಗೆ ನೌಕರಿ ದೊರಕಿಸಿ ಪಟ್ಟಣಕ್ಕೆ ಕರೆಯುತ್ತಿರಬಹುದು ಅಂತ ನನ್ನ ಕಲ್ಪನೆಯಿತ್ತು, ಅವರ ಪತ್ರ ಓದಿದರೂ ಹಾಗೇ ಅನ್ನಿಸುತ್ತದೆ.

**ಚಂಪಾವತಿ :**

ಹೆಂಗಸರನ್ನು ಬಲು ಸುಲಭವಾಗಿ ಮರುಳು ಮಾಡುವ ಹಾಗೆ ಪತ್ರ

ಬರೆಯುವದರಲ್ಲಿ ಪಕ್ಕಾ ಇದ್ದಾರೆ ಅವರು. ಎಲ್ಲಿದೆ ಆ ಪತ್ರ? ತಾ ಇಲ್ಲಿ. ನೋಡೋಣ

(ಸರೋಜ ಕಾಗದವನ್ನು ಕೊಡುವಳು)

**ಚಂಪಾವತಿ :**

(ಗಟ್ಟಿಯಾಗಿ ಓದಿಕೊಳ್ಳುವಳು. ಮಧ್ಯೆ ಮಧ್ಯೆ ನಗುವಳು) "ಶ್ರೀಮತಿ ಸರೋಜಾ ದೇವಿಯವರಿಗೆ. ಶಾಂತಣ್ಣನ ಅನಂತ ವಂದನೆಗಳು, ಬಹಳ ದಿನಗಳಿಂದ ನಿಮ್ಮಿಂದ ಪತ್ರ ಬರಲಿಲ್ಲವೆಂದು ಮನಸ್ಸಿಗೆ ಬಲು ವ್ಯಸನವಾಗಿತ್ತು. ನಾನಾದರೂ ನಿಮಗೆ ಬರೆದು ನಿಮ್ಮ ಯೋಗಕ್ಷೇಮ ತಿಳಿದುಕೊಳ್ಳ ಬೇಕಾದುದು ನನ್ನ ಕರ್ತವ್ಯವಾಗಿತ್ತು. ನಿಮ್ಮ ಪೂಜ್ಯತಾಯಿಗೆ ನಾನು ಕೊಟ್ಟ ವಚನವನ್ನು ಕೆಲಕಾಲವಾದರೂ ಮರೆತು ವರ್ತಿಸಿದ್ದೇನೆ. ಅದಕ್ಕಾಗಿ ನಿಮ್ಮ ಕ್ಷಮೆ ಕೋರುತ್ತೇನೆ. ಈ ಮಧ್ಯೆ ನಿಮ್ಮ ವಿವಾಹ ನೆರವೇರಿದ ವಾರ್ತೆಯೂ ತಿಳಿದಿತ್ತು. ಈಗಲೇ ವಿವಾಹವಾಗಲು ಇಷ್ಟಪಡದಿದ್ದ ನೀವು ಏಕಾಏಕಿ ವಿವಾಹವಾದ ಸುದ್ದಿ ತಿಳಿದಾಗ ನಾನು ಚಿಂತೆಗೊಳಗಾದೆ. ನಿಮಗೇನು ವಿಪತ್ತು ಬಂದಿದೆಯೋ ಯಾರು ಬಲ್ಲರು? ನಿಮ್ಮನ್ನು ಸಂಕಟಗಳಿಂದ ಪಾರುಮಾಡಬೇಕಾದದ್ದು ನನ್ನ ಕರ್ತವ್ಯ. ಬಹಳ ದಿನಗಳವರೆಗೆ ಯತ್ನಿಸಿದ ಬಳಿಕ ಇದೀಗ ನಿಮಗೆ ಮಾಸ್ತರತಿಯ ಕೆಲಸ ದೊರಕಿಸಿ ಕೊಡುವಲ್ಲಿ ಯಶಸ್ವಿಯಾಗಿದ್ದೇನೆ. ಅಲ್ಲಿ ಹಳ್ಳಿಯಲ್ಲಿ ನಿಮ್ಮ ಮನಸ್ಸಿನ ವಿರುದ್ಧ ಕೂತು ಕಷ್ಟಪಡುವದೇಕೆ? ಈ ಪತ್ರ ನೋಡುತ್ತಲೂ ಹೊರಟು ಬರಬೇಕು. ನನ್ನ ಬಗ್ಗೆ ಯಾವ ಬಗೆಯ ಸಂಶಯವೂ ಬೇಡ, ಹಿಂದೆ ಆದದ್ದು ಮರೆತುಬಿಡಿರಿ. ಇನ್ನು ಮುಂದೆ ಅಂಥ ಪ್ರಸಂಗ ನಡೆಯಲಿಕ್ಕಿಲ್ಲವೆಂದು ಭರವಸೆ ಕೊಡುತ್ತೇನೆ. ಇಂತು ನಿಮ್ಮ ಹಿತಾಭಿಲಾಷಿ – ಟೋಪಿ ಶಾಂತಣ್ಣ." (ಓದಿ ಮುಗಿಸಿ, ವ್ಯಂಗ್ಯಸ್ವರದಲ್ಲಿ) ನಿಮ್ಮ... ಹಿತಾಭಿಲಾಷಿ.... ಟೋಪಿ ಶಾಂತಣ್ಣ! ಟೋಪಿ ಹಾಕುವುದರಲ್ಲಿ ನುರಿತ ಶಾಂತಣ್ಣ! ನನಗೂ ಹೀಗೇ ಸವಿ ಸವಿ ಮಾತಾಡಿ ಟೋಪಿ ಹಾಕಿದ್ದ. ಈಗ ನಿನಗೆ ಹಾಕಲು ತಯಾರಾಗಿದ್ದಾನೆ. ಮತ್ತೆ ಅವನ ಬಲೆಗೆ ಬೀಳಲು ತಯಾರಾಗಿದ್ದಿಯೇನು ನೀನು?

**ಸರೋಜ :**

ಹಾಗಿಲ್ಲಾ ಮೋಸಹೋಗಲು ನಾನು ಮಗುವಲ್ಲ. ಈ ಏಳೆಂಟು ತಿಂಗಳ ಅವಧಿಯಲ್ಲಿ ನಾನೂ ಬಹಳ ತಿಳಿದುಕೊಂಡಿದ್ದೇನೆ.

**ಚಂಪಾವತಿ :**

ಏನು ತಿಳಿದುಕೊಂಡಿದ್ದೀಯೋ! ಸಂಸಾರ ನಡೆಸುವದಕ್ಕೆ ಕೂಡಾ ತಿಳಿದುಕೊಂಡ ಹಾಗೆ ಕಾಣುವದಿಲ್ಲ.

**ಸರೋಜ :**

ಈ ಹಾಳು ಸಂಸಾರವೇ ಬೇಕಾಗಿರಲಿಲ್ಲ ನನಗೆ.

**ಚಂಪಾವತಿ :**

ನಿನಗೆ ಏನೇನೂ ತಿಳಿಯುವದಿಲ್ಲ ಸರೋಜಾ. ಸಂಸಾರ ಬೇಡವಾದರೆ ಇನ್ನೇನು ಬೇಕಾಗಿತ್ತು ನಿನಗೆ?

**ಸರೋಜ .**

ಇನ್ನೇನು ಬೇಕಾಗಿತ್ತು? (ಗೊಂದಲದಲ್ಲಿ ಬಿದ್ದು) ಇನ್ನೇನು ಬೇಕಾಗಿತ್ತು? ನನಗೆ ಬೇಕಾಗಿದ್ದುದೇನು? (ಅತ್ತಿತ್ತ ನಡೆದಾಡುವಳು)

**ಚಂಪಾವತಿ :**

(ನಗುತ್ತಾ) ಅದು ಬೇಡಾ ಇದು ಬೇಡಾ ಅಂತ ಚಟ್‌ಪಟ್ ಹೇಳಲು ಬರುತ್ತದೆ. ಯಾವದು ಬೇಕು ಅಂತ ಹೇಳಲು ಮಾತ್ರ ಬರುವುದಿಲ್ಲ. (ಸ್ವಲ್ಪ ತಡೆದು) ಇದರರ್ಥವೇನಂದರೆ, ನಿನಗೆ ಬೇಕಾದುದೇನು ಅನ್ನುವದೇ ನಿನಗೆ ಸರಿಯಾಗಿ ಗೊತ್ತಿಲ್ಲ. ಯಾವುದೋ ಒಂದು ಕಲ್ಪನಾಲೋಕದಲ್ಲಿ ವ್ಯರ್ಥವಾಗಿ ವಿಹರಿಸುತ್ತಿರುವ ಮುಗುದೆ ನೀನು.

**ಸರೋಜ :**

ನನಗೆ ಬೇಕಾದುದು ಸ್ವಾತಂತ್ರ್ಯ!

**ಚಂಪಾವತಿ :**

ಸ್ವಾತಂತ್ರ್ಯ! ಸ್ವಾತಂತ್ರ್ಯ! ಸ್ವಾತಂತ್ರ್ಯ! ಮೂರಕ್ಷರಗಳ ಈ ಶಬ್ದವನ್ನು ಚ್ಚರಿಸುವದೇನೋ ಬಹಳ ಸುಲಭ, ಆದರೆ ಪೂರ್ಣ ಅರ್ಥ ತಿಳಿದು

ಕೊಳ್ಳುವದು ಮಾತ್ರ ಬಹಳ ಕಷ್ಟ. ಮನಸ್ಸು ಹೇಳಿದಂತೆ ಕುಣಿಯುವದೆಂದರೆ ಸ್ವಾತಂತ್ರ್ಯವಲ್ಲ. ಸಮಾಜವಲ್ಲಿಯ ತನ್ನ ಜವಾಬ್ದಾರಿಯನ್ನರಿತುಕೊಂಡು ಒಳ್ಳೆಯ ಸಮಾಜಜೀವಿಯಾಗಿ ಬಾಳುವದೇ ನಿಜವಾದ ಸ್ವಾತಂತ್ರ್ಯ.

**ಸರೋಜ :**

(ವ್ಯಂಗ್ಯ ಸ್ವರದಲ್ಲಿ) ನೀನೇನೋ ದೊಡ್ಡ ಸಮಾಜಜೀವಿಯಂತೇ ಉಪದೇಶ ಮಾಡತೊಡಗಿದ್ದೀಯಲ್ಲ!

**ಚಂಪಾವತಿ .**

(ಕಳವಳದಿಂದ) ನನ್ನ ಬಾಳಿನ ಕ್ರೂರಕತೆಯೆಲ್ಲಾ ನಿನಗೂ ಗೊತ್ತೇ ಇದೆ ಸರೋಜಾ! ನನ್ನನ್ನು ನೀನು ಹೀಗೆ ಹಂಗಿಸಬಾರದು ಎಲ್ಲರಂತೆ ನಾನೂ ಮದುವೆಯಾಗಿ ಒಳ್ಳೆಯ ಸಂಸಾರಿಯಾಗಿ ಬಂದು ಮನೆತನವನ್ನು ಬೆಳಗಲು ಬಯಸಿದ್ದೆ. ಆದರ್ಶ ಮಹಿಳೆಯಾಗಿ ನನ್ನ ಜೀವನ ಸಾಗಿಸಲು ಬಯಸಿದ್ದೆ. ಆದರೆ....ಆದರೆ....ನೀನೂ ಬಲ್ಲೆ. ನನ್ನನ್ನು ಮದುವೆಯಾಗಲು ಯಾರೂ ತಯಾರಾಗಲಿಲ್ಲ ನಾನಾದರೂ ಏನು ಮಾಡಲಿ? ಹೆಣ್ಣಾಗಿ ಹುಟ್ಟಿ ಬಂದ ಮೇಲೆ ಒಂದು ಗಂಡಿನ ಸಹವಾಸವಂತೂ ಬೇಕೇಬೇಕು ನನಗೂ ಬೇಕು, ನಿನಗೂ ಬೇಕು, ಎಲ್ಲರಿಗೂ ಬೇಕು. ಶಾಂತಣ್ಣ ಸವಿಸವಿ ಮಾತಾಡಿ ನನ್ನನ್ನು ತನ್ನ ಮೋಹಜಾಲದಲ್ಲಿ ಕೆಡವಿಕೊಂಡರು. ನಾನೂ ಅವರನ್ನು ನಂಬಿದೆ, ನಂಬಿ ಇಲ್ಲಿಯವರೆಗೂ ಅವರೊಡನೆ ಬಾಳಿದೆ. ಅವರು ನನ್ನನ್ನು ಮದುವೆಯಾಗಲಿಲ್ಲ. ಆದರೂ ನಾನು ಅವರ ಹೆಂಡತಿಯಂತೆಯೇ ಬಾಳಿದೆ. ಸುದೈವದಿಂದ ನಿನಗೆ ಮದುವೆಯಾಗಿದೆ. ನಿನಗೆ ಎಲ್ಲಾ ವಿಷಯಗಳಲ್ಲೂ ಅನುರೂಪನಾದ ಗಂಡ ಸದಾಶಿವ. ಇಂಥ ಯೋಗ್ಯ ಗಂಡ ಸಿಗಬೇಕಾದರೆ ಪುಣ್ಯ ಮಾಡಿ ಬಂದಿರಬೇಕು, ಪುಣ್ಯ! ಎಲ್ಲರಿಗೂ ಇಂಥಾ ಗಂಡ ಸಿಗುವದಿಲ್ಲ.

**ಸರೋಜ :**

ಅವರ ವಿಷಯ ನಿನಗೇನು ಗೊತ್ತು! ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ.

**ಚಂಪಾವತಿ :**

ಯಾಕೆ? ಅವರಿಂದ ನಿನಗೇನು ತೊಂದರೆ? ಅವರೇನು ಅಶಿಕ್ಷಿತರಲ್ಲ, ಒರಟರಲ್ಲ, ಅಸಂಸ್ಕೃತರಲ್ಲ. ನನಗೆ ಗೊತ್ತಿದ್ದ ಹಾಗೆ ಯಾವ ದುಶ್ಚಟವೂ ಅವರಿಗಿಲ್ಲ.

**ಸರೋಜ :**

ಹೆಂಡತಿಯನ್ನು ಯಾವಾಗಲೂ ಕಾಡಿಸುವ ಕೆಟ್ಟ ಚಟವೊಂದು ಇದೆಯಲ್ಲ!

**ಚಂಪಾವತಿ :**

ಕಾಡಿಸುತ್ತಾರೆಯೇ? ನಿನ್ನ ಮಾತಿನಿಂದ ನನಗೆ ಬಹಳ ಆಶ್ಚರ್ಯವಾಗುತ್ತದೆ. ಯಾಕೆ ಕಾಡಿಸುತ್ತಾರೆ?

**ಸರೋಜ :**

ನಾನು ಚಹಾ ಕುಡಿಯಬಾರದಂತೆ

(ಚಂಪಾವತಿ ಗಟ್ಟಿಯಾಗಿ ನಗುವಳು)

**ಸರೋಜ .**

ಹಳ್ಳಿಯ ಹೆಂಗಸರ ಹಾಗೆ ನಾನೂ ಸೆಗಣಿ ಹೊರಬೇಕಂತೆ.

(ಚಂಪಾವತಿ ಭಯಂಕರವಾಗಿ ನಗುವಳು)

**ಸರೋಜ :**

ಹುಂಬ ಹೆಂಗಸರ ಹಾಗೆ ನಾನೂ ಹೊಲಕ್ಕೆ ಹೋಗಿ ಕುರುಪಿ ಹಿಡಿದು ಕಸಾ ಕೆತ್ತಬೇಕಂತೆ!

(ಚಂಪಾವತಿ ಬಿದ್ದು ಬಿದ್ದು ನಗುವಳು)

**ಸರೋಜ :**

ನಿನಗೆ ನಗೆ. ನನಗೆ ಪ್ರಾಣಸಂಕಟ!

**ಚಂಪಾವತಿ .**

ರೋಮನಗರಕ್ಕೆ ಹೋದವರು ರೋಮನ್ನರ ಹಾಗೇ ಇರಬೇಕು ಅಂತ ಗಾದೆಯೇ ಇದೆ, ಗೊತ್ತಿಲ್ಲವೇ ನಿನಗೆ? ನೀನು ಮ್ಯಾಟ್ರಿಕ್ ತನಕ ಓದಿದರೂ ಅದರ ಉಪಯೋಗವೇನೂ ಆಗಲಿಲ್ಲನಲ್ಲಾ! ಹಳ್ಳಿಯಲ್ಲಿರು

ವವರನ್ನು ಕೈಹಿಡಿದ ಹೆಣ್ಣು ಹಳ್ಳಿಯವರ ಹಾಗೇ ಇರಬೇಕಾಗುವದೆಂಬು ದನ್ನೂ ನಿನಗೆ ಹೇಳಿ ಕೊಡಬೇಕೇನೊ! ನೀನು ಪಟ್ಟಣದ ಹುಡುಗಿ ಎಂಬ ಜಂಬವನ್ನು ಇನ್ನೂ ಬಿಟ್ಟಂತೆ ಕಾಣುವದಿಲ್ಲ. ನಿನ್ನ ದುಃಖಕ್ಕೆಲ್ಲಾ ಅದೇ ಮೂಲಕಾರಣ.

– ಗೀತೆ –

ಬಿಡು ಬಿಡು ಗೆಳತಿ, ಬಡಿವಾರ, ಸಾಕು ನಟನೆಯಿನ್ನ !
ಬಿಡು ಬಿಡು ಯುವತಿ, ಒಯ್ಯಾರ, ಸಾಕು ಬಲ್ಲೆ ನಿನ್ನ !
ನಗರದ ವನಿತೆ, ವಿದ್ಯಾ ಭೂಷಿತೆ,
ಅಹಂಕಾರವಿದು ಸರಿಯೆ ಲಲಿತೆ ?
ಮನವಾ ನಿರ್ಮಲಗೊಳಿಸೆ! ಸಾಕು ಜಂಬವಿನ್ನ !

**ಸರೋಜ.**

ನೀನೇನೇ ಹೇಳು ಚಂಪಾವತಿ! ಇವರಿಗೆ ಮಾತ್ರ ನನ್ನ ಕಂಡರಾಗದು. ನನ್ನ ಮೇಲೆ ನಿಜವಾದ ಪ್ರೇಮವೂ ಇಲ್ಲ.

**ಚಂಪಾವತಿ:**

ಪ್ರೇಮ! ಪ್ರೇಮ ಅಂದರಾದರೂ ಏನೆಂದು ತಿಳಿದುಕೊಂಡಿದ್ದೀ ನೀನು?

**ಸರೋಜ:**

(ಗೊಂದಲಕ್ಕೊಳಗಾಗಿ) ಪ್ರೇಮ ಅಂದರೆ ಯಾರಿಗೆ ಗೊತ್ತಿಲ್ಲ?

**ಚಂಪಾವತಿ:**

ಯಾರಿಗೇ ಗೊತ್ತಿದ್ದರೂ ನಿನಗೆ ಮಾತ್ರ ಸರಿಯಾಗಿ ಗೊತ್ತಿಲ್ಲ. ಪ್ರೇಮ ಅಂದರೆ ಬರಿಯ ಹುಚ್ಚಾಟವಲ್ಲ ಸರೋಜಾ. ಕೋಟಿಕೋಟಿ ವರ್ಷಗಳಿಂದ ಈ ಪ್ರಪಂಚವನ್ನು ನಡಸುತ್ತ ಬಂದು ಮನುಷ್ಯಪ್ರಾಣಿಯನ್ನು ಒಂದು ನಾಗರಿಕ ಮಟ್ಟಕ್ಕೆ ತಂದುಬಿಟ್ಟದ್ದು ಪ್ರೇಮ. ನಿಜವಾದ ಪ್ರೇಮಕ್ಕೆ ಸ್ವಾರ್ಥದ ಸೋಂಕು ತಗಲಿರುವದಿಲ್ಲ. ಗಂಡಸು ಹೆಂಗಸಿನ ನಡುವೆ ಮೊದಲು ಮೊದಲು ನಿಜವಾದ ಪ್ರೇಮವಿರುವುದಿಲ್ಲ – ಮೊದಲು ಬರಿಯ ಮೋಹವಿರುತ್ತದೆ. ಅದರ ಕಾವು ಆರಿದ ಮೇಲೆ ಪರಸ್ಪರರ ಸಹವಾಸದಲ್ಲಿ

ಪ್ರೇಮ ಹುಟ್ಟುತ್ತದೆ, ದಂಪತಿಗಳು ಪರಸ್ಪರರಿಗಾಗಿ ಮಾಡುವ ತ್ಯಾಗವೇ ನಿಜವಾದ ಪ್ರೇಮ. ಇನ್ನೊಬ್ಬರ ಸುಖಕ್ಕಾಗಿ ತನ್ನ ಸುಖವನ್ನು ಕೂಡ ತ್ಯಾಗಮಾಡುವದೇ ನಿಜವಾದ ಪ್ರೇಮ, ಪವಿತ್ರಪ್ರೇಮ. ಸಾವಿತ್ರಿಯದು ಅಂಥಾ ಪ್ರೇಮ, ಸೀತೆಯದು ಅಂಥಾ ಪ್ರೇಮ, ಶಕುಂತಲೆಯದು ಅಂಥಾ ಪ್ರೇಮ ಯಶೋಧರೆಯದು ಅಂಥಾ ಪ್ರೇಮ ಇಂಥಾ ಉದಾತ್ತ ನಾರೀ ಮಣಿಯರು ಹುಟ್ಟಿ, ಬೆಳೆದು ಬಾಳಿದ ಈ ಪವಿತ್ರ ಭಾರತದಲ್ಲೇ ನೀನೂ ಹುಟ್ಟಿ ಬಂದವಳು.

**ಸರೋಜ :**

ಪುರಾಣಕಾಲದ ಈ ಪತಿವ್ರತೆಯರ ಮಾತು ನನ್ನ ಮುಂದೆ ಹೇಳಬೇಡ. ಗಂಡಸಿನ ಗುಲಾಮಗಿರಿಯಲ್ಲಿ ಕೊಳೆಯುವದೇ ಪಾವಿತ್ರ್ಯ, ಪಾತಿವ್ರತ್ಯ, ಶೀಲ, ಚಾರಿತ್ರ್ಯ ಅಂತ ನಾನು ತಿಳಿದಿಲ್ಲ. ಇಂದಿನ ಸುಶಿಕ್ಷಿತ ಮಹಿಳೆಯರಾದ ನಾವು ಇಂಥಾ ಹಳೆಯ ಕಾಲದ ವಿಚಾರಗಳಿಗೆ ಕವಡೆಯ ಬೆಲೆಯನ್ನೂ ಕೊಡುವದಿಲ್ಲ.

**ಚಂಪಾವತಿ :**

ಬೆಲೆ ಅಂದರಾದರೂ ಏನು ಅನ್ನುವದೂ ನಿನಗೆ ಗೊತ್ತಿದ್ದ ಹಾಗೆ ಕಾಣುವದಿಲ್ಲ. ನಾವು ಜೀವನದಲ್ಲಿ ಸಾಧಿಸಬೇಕಾದುದಾದರೂ ಏನು ಸರೋಜಾ? ನಮ್ಮಿಷ್ಟಕ್ಕೆ ನಾವು ಸುಖವಾಗಿ ಬದುಕಬೇಕು, ನಮ್ಮಂತೆ ಎಲ್ಲರೂ ಸುಖವಾಗಿ ಬದುಕಬೇಕೆಂದು ಬಯಸಬೇಕು, ಸಾಧ್ಯವಾದರೆ ಅದಕ್ಕಾಗಿ ದುಡಿಯಬೇಕು. ಜೀವನದ ತತ್ವಜ್ಞಾನ ಅಂದರಿದೇ ಅಂತ ನನಗೆ ತೋರುತ್ತದೆ. ನಿನ್ನ ತತ್ವಜ್ಞಾನವಾದರೂ ಏನು?

**ಸರೋಜ :**

(ಗೊಂದಲದ ಮನಃಸ್ಥಿತಿಯಲ್ಲಿ) ನೀನು ಅನ್ನುವದೂ ನಿಜ, ಚಂಪಾವತಿ, ನೀನು ಅನ್ನುವದೂ ನಿಜ!

(ಚಂಪಾವತಿ ಸಮಾಧಾನದಿಂದ ಕುರ್ಚಿಯಲ್ಲಿ ಕುಳಿತುಕೊಳ್ಳುವಳು)

**ಚಂಪಾವತಿ :**

ಬರಿಯ ಮಾತೇ ಆಯಿತಲ್ಲ! ಹಸಿವು ಬಂದಿದ್ದೇನೆ. ನನ್ನನ್ನು ಹೀಗೇ ಕಳಿಸುವಿಯೋ ಏನು?

**ಸರೋಜ.**

ಸ್ವಲ್ಪ ಕೂತುಕೋ. ಐದು ನಿಮಿಷದಲ್ಲಿ ಉಪ್ಪಿಟ್ಟು ಮಾಡಿಕೊಡುತ್ತೇನೆ.

**ಚಂಪಾವತಿ :**

(ನಗುತ್ತಾ) ಉಪ್ಪಿಟ್ಟು ತಿನ್ನಬಾರದಂತ ಹೇಳಿಲ್ಲ ಹೌದಲ್ಲೋ ನಿನ್ನ ಯಜಮಾನರು?

**ಸರೋಜ.**

ಉಪ್ಪಿಟ್ಟು ಯಾಕೆ ಬೇಡ ಅಂದಾರು? ಅವರೂ ತಿನ್ನುತ್ತಾರೆ ಗಂಗಾಳ ತುಂಬಾ.

**ಚಂಪಾವತಿ :**

ಯಾರಿಗೆ ಗೊತ್ತು ತಾಯಿ! ಉಪ್ಪಿಟ್ಟು ಅಂದರೆ ಚಹಾದ ಖಾಸಾ ತಮ್ಮ ಅಲ್ಲವೇನು! ಅದಕ್ಕಾಗಿ ಕೇಳಿದೆ.

(ಸರೋಜಳೂ ನಗುತ್ತ ಒಳಗೆ ಹೋಗುವಳು. ಚಂಪಾವತಿ ಕುರ್ಚಿಯಲ್ಲೊರಗಿ ಕಣ್ಣು ಮುಚ್ಚಿಕೊಳ್ಳುತ್ತಿದ್ದ ಹಾಗೆ ತೆರೆ ಬೀಳುವುದು.)

# ನಾಲ್ಕನೆಯ ಅಂಕ.

[ಒಂದು ವರ್ಷ ಕಳೆದುಹೋಗಿದೆ. ಸದಾಶಿವನ ಮನೆಯ ಪಡಸಾಲೆಯಲ್ಲಿ ಕೆಲವು ಬದಲಾವಣೆ ಕಾಣಿಸುತ್ತಿವೆ. ಹಳ್ಳಿಗರ ಒರಟುಸೀರೆ ಕುಬುಸ ತೊಟ್ಟ ಸರೋಜಾ ಕೈಯಲ್ಲಿ ಕುರುಪಿ ಹಿಡಿದುಕೊಂಡು ಬರುವಳು. ಅವಳ ಹಿಂದಿನಿಂದ ಸದಾಶಿವನೂ ಬರುವನು. ಅವನ ಕೈಯಲ್ಲೂ ಕುರುಪಿಯಿದೆ. ಅದನ್ನು ಒಂದೆಡೆ ಇಟ್ಟು ಅವನು ಕುರ್ಚಿಯಲ್ಲೊರಗುವನು. ಅವನ ಮುಖ ಚಿಂತಾಗ್ರಸ್ತವಾಗಿದೆ.]

**ಸರೋಜ :**

(ಅವನ ತಲೆಗೂದಲಲ್ಲಿ ಬೆರಳನ್ನಾಡಿಸುತ್ತಾ) ಏನು ಹಾಳು ಚಿಂತೆಯೋ ನಿಮ್ಮದು! ಬಿಡಿರಿ, ಬಿಡಿರಿ.

(ಸದಾಶಿವ ಮೌನ)

**ಸರೋಜ .**

ದೇಶಕ್ಕೆಲ್ಲಾ ಬಂದದ್ದು ನಮಗೂ ಬರುತ್ತದೆ. ಅದಕ್ಕ್ಯಾಕೆ ಇಷ್ಟೊಂದು ಚಿಂತೆ ಮಾಡಬೇಕೋ ನನಗಂತೂ ತಿಳಿಯದು.

**ಸದಾಶಿವ :**

(ನಿಧಾನವಾಗಿ) ದೇಶಕ್ಕೆಲ್ಲಾ ಬರುತ್ತದಲ್ಲಾ ಅಂತಲೇ ನನಗೆ ಚಿಂತೆ.

**ಸರೋಜ :**

ಮಳೆಯೇನು ನಮ್ಮ ಕೈಯೊಳಗಿನದೇ? ಅದು ಬಂದರೆ ಬಂತು. ಬರದಿದ್ದರೆ ಇಲ್ಲ.

**ಸದಾಶಿವ :**

ಅದು ಬರದಿದ್ದರೆ ಜನರಿಗೆಲ್ಲ ಉಪವಾಸದ ಪ್ರಸಂಗ ಬರುತ್ತದಲ್ಲ?

**ಸರೋಜ :**

ಅದಕ್ಕೆ ಯಾರೇನು ಮಾಡಬೇಕು? ಬಂದದ್ದನ್ನು ಅನುಭವಿಸಲೇಬೇಕಲ್ಲ?

**ಸದಾಶಿವ :**

ಅದೂ ನಿಜ. ಸಾವಿರಾರು ವರ್ಷಗಳಿಂದಲೂ ನಮ್ಮ ರೈತರು ಹೀಗೆ ಹೇಳಿ ಕೊಳ್ಳುತ್ತಾ ಬಂದ ಸಂಕಟಗಳನ್ನೆಲ್ಲ ಮೌನವಾಗಿ ಅನುಭವಿಸುತ್ತ

ಬಂದಿದ್ದಾರೆ. (ಕುರ್ಚಿಯಿಂದೆದ್ದು ಅಡಿಯಿಡುತ್ತಾ) ಆದರೆ.... ಆದರೆ.... ಇನ್ನು ಮಾತ್ರ ಅವರು ಹೀಗೆ ತೆಪ್ಪಗೆ ಅನುಭವಿಸುವಂತಾಗಬಾರದು.

**ಸರೋಜ.**

ಅದಕ್ಕೆ ನೀವೇನು ಮಾಡೀರಿ? ಮೋಡಗಳಿಗೆ ಹುಕುಂ ಕೊಟ್ಟು ಮಳೆ ಬೀಳಿಸುವ ಶಕ್ತಿಯೇನೂ ನಿಮ್ಮಲ್ಲಿಲ್ಲವಲ್ಲಾ!

**ಸದಾಶಿವ:**

ನನ್ನಲ್ಲಿಲ್ಲ, ನಿಜ. ಆದರೆ ಬೆಳೆಯುತ್ತಿರುವ ವಿಜ್ಞಾನಕ್ಕೆ ಆ ಶಕ್ತಿಯೂ ಬಂದಿದೆ. ಕೃತ್ರಿಮವಾದ ರೀತಿಯಲ್ಲಿ ಮಳೆ ಬೀಳಿಸುವ ಪ್ರಯೋಗ ಪರದೇಶಗಳಲ್ಲಿ ನಡೆದಿದೆ. ನಮ್ಮ ದೇಶದಲ್ಲೂ ಅದು ಆರಂಭವಾದರೆ ಇಂದಿನಂತೆ ನಾವು ಬರಗಾಲದ ಮಾರಿಗೆ ಬಲಿಬೀಳಬೇಕಾದ ಪ್ರಸಂಗ ಬರಲಿಕ್ಕಿಲ್ಲ.

**ಸರೋಜ:**

ಸರಿ ಬಿಡಿರಿ. ಆ ಪ್ರಯೋಗ ಆಗುವದು ಯಾವಾಗಲೋ ಏನೋ.

**ಸದಾಶಿವ:**

ಅದು ಎಂದಾದರೂ ಆಗಲಿ. ಅದುವರೆಗೆ ಸಾಧ್ಯವಾದ ಮಟ್ಟಿಗೂ ನೀರಿನ ಕೊರತೆಯನ್ನು ಹೋಗಲಾಡಿಸಿಕೊಳ್ಳಲು ರೈತರಾದ ನಾವು ಯತ್ನಿಸಬೇಕು. ಈಗ ನೋಡು, ನಮ್ಮೂರ ಹತ್ತಿರವೇ ಹಳ್ಳ ಹರಿದು ಹೋಗುತ್ತದಲ್ಲಾ, ಮಳೆಗಾಲದಲ್ಲಿ ಅದರ ನೀರೆಲ್ಲಾ ವ್ಯರ್ಥವಾಗಿ ಹರಿದುಹೋಗಿ ಹೊಳೆಗೆ ಕೂಡುತ್ತದೆ, ಆ ಹೊಳೆ ಸಮುದ್ರಕ್ಕೆ ಹೋಗಿ ಮುಟ್ಟುತ್ತದೆ. ಮಳೆಗಾಲದಲ್ಲಿ ವ್ಯರ್ಥವಾಗಿ ಹೋಗುವ ಈ ಹಳ್ಳದ ನೀರನ್ನೇ ನಾವು ಬುದ್ಧಿವಂತಿಕೆಯಿಂದ ಉಪಯೋಗಿಸಿಕೊಂಡರೆ ಮಳೆ ಬರದಿದ್ದಾಗ ನಮ್ಮ ಬೆಳೆ ಒಣಗಿಹೋಗುವ ಪ್ರಸಂಗ ತಪ್ಪುತ್ತದೆ. ಹಳ್ಳಕ್ಕೊಂದು ಒಡ್ಡು ಕಟ್ಟಿ ನೀರನ್ನು ಸಂಗ್ರಹಿಸ ಬೇಕು.

**ಸರೋಜ:**
ಒಡ್ಡು ಕಟ್ಟುವದೆಂದರೇನು ಸಾಧಾರಣ ಮಾತೇ? ಅದಕ್ಕೇ ನಾವಿರಾರು ರೂಪಾಯಿ ಖರ್ಚು ಬರುತ್ತದೆ. ಸರಕಾರ ಮುಂದೆ ಬರಬೇಕು.

**ಸದಾಶಿವ:**
ಎಲ್ಲಾ ಕೆಲಸಗಳಿಗೂ ಸರಕಾರವೇ ಮುಂದೆ ಬರಬೇಕೆಂದರೆ ನಾವು ಇರುವ ದಾದರೂ ಯಾಕೆ ಸರೋಜಾ? ಸರಕಾರ ಮಾಡುವ ಕೆಲಸ ಸರಕಾರ ಮಾಡಲಿ. ನಾವು ಮಾಡುವ ಕೆಲಸ ನಾವು ಮಾಡೋಣ. ನಮ್ಮ ಹಳ್ಳಿ, ಮರಡಿಹಳ್ಳಿ, ಸುತ್ತಮುತ್ತಲಿನ ಮೂರು ಹಳ್ಳಿಗಳಲ್ಲಿ ಒಂದೊಂದು ಮನೆಗೆ ಒಂದೊಂದು ಆಳಿನಂತೆ ಬಂದು ಪ್ರಕ್ಕಟಿಯಾಗಿ ಒಡ್ಡು ಕಟ್ಟಲು ದುಡಿಯ ಬೇಕು. ಈ ಒಡ್ಡಿನಿಂದ ನಮ್ಮೆಲ್ಲರಿಗೂ ಉಪಯೋಗವಾಗುವದಿಲ್ಲವೇನು? ಅಂದ ಬಳಿಕ ನಾವೇ ದುಡಿದು ಅದನ್ನು ಕಟ್ಟಿಕೊಳ್ಳಬೇಕು.

**ಸರೋಜ:**
ಈ ಮಂದಿ ನಿಮ್ಮ ಮಾತು ಕೇಳಬೇಕಲ್ಲರೀ! ತಮ್ಮ ಕೆಲಸ ಬಿಟ್ಟು ಬಂದಾರೇ ಅವರು?

**ಸದಾಶಿವ:**
ಇದೂ ಅವರದೇ ಕೆಲಸ, ಅವರಿಗೇ ಲಾಭದಾಯಕವಾದ ಕೆಲಸ ಅಂತ ಗೊತ್ತಾದರೆ ಅವರೆಲ್ಲಾ ಬಂದೇ ಬರುತ್ತಾರೆ ಸರೋಜಾ. ಇನ್ನು ಮೇಲೆ ನಾನು ಇದೇ ಕೆಲಸಕ್ಕೆ ತೊಡಗಬೇಕೆಂದು ವಿಚಾರ ಮಾಡಿದ್ದೇನೆ. ಹೂಂ. ಅದೆಲ್ಲಾ ಇರಲಿ. ಮಲ್ಲಣ್ಣ ಬರಬೇಕಾಗಿತ್ತಲ್ಲ ಇವತ್ತು? ಇನ್ನೂ ಯಾಕೆ ಬರಲಿಲ್ಲವೋ ಏನೊ.

**ಸರೋಜ:**
ಇನ್ನೇನು ಬರುವ ವೇಳೆಯಾಯಿತು. ಒಂದೆರಡು ದಿನ ಅವನ ಸಂಗಡ ಹೋಗಿದ್ದು ಬರಲೇನ್ರಿ?

**ಸದಾಶಿವ:**
ನಿನಗಿಲ್ಲಿ ಬಹಳ ಬೇಸರವಾಗಿದ್ದರೆ ಹೋಗಿ ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು ಬಾ, ಈ ಒಂದು ವರ್ಷವೆಲ್ಲಾ ನೀನೂ ಬಹಳ ಕಷ್ಟಪಟ್ಟು ದುಡಿದಿದ್ದೀ.

**ಸರೋಜ :**

ಕಷ್ಟಪಡದಿದ್ದರೆ ಬಾಳುವೆ ಆಗುವದು ಹ್ಯಾಗೆ?

**ಸದಾಶಿವ :**

(ಅವಳ ಬಳಿ ಬಂದು ಕೌತುಕದಿಂದ) ಪಟ್ಟಣದ ಹುಡುಗಿ ಈಗ ಪೂರಾ ಹಳ್ಳಿಯ ಹುಡುಗಿಯಾದಂತಾಯಿತು.

**ಸರೋಜ :**

ನಾನ್ಯಾಕೆ ಹಳ್ಳಿಯ ಹುಡುಗಿಯಾದೇನು ! ಮ್ಯಾಟ್ರಿಕ್‌ವರೆಗೆ ಕಲಿತಿದ್ದೇನೆ !

**ಸದಾಶಿವ :**

ನೀನು ಪಟ್ಟಣದಲ್ಲಿ ಮ್ಯಾಟ್ರಿಕ್‌ವರೆಗೆ ಕಲಿತದ್ದೇನೂ ಇಲ್ಲಿ ಉಪಯೋಗ ವಾಗಲಿಲ್ಲ. ಒಂದು ವರ್ಷದ ಅವಧಿಯಲ್ಲಿ ಇಲ್ಲಿ ಸ್ವಾನುಭವದಿಂದ ಕಲಿತದ್ದು ಮಾತ್ರ ಉಪಯೋಗವಾಯಿತು.

**ಸರೋಜ :**

ಅದೂ ನಿಜವೇ ಅನ್ನಿರಿ. ಪಟ್ಟಣದ ವಿದ್ಯೆ ಪಟ್ಟಣಕ್ಕೆ. ಹಳ್ಳಿಯ ವಿದ್ಯೆ ಹಳ್ಳಿಗೆ.

**ಸದಾಶಿವ :**

ನಿನಗೆ ಹಳ್ಳಿ ಎಂದೆಂದೂ ರೂಢಿಯಾಗುವದಿಲ್ಲವೇನೋ ಅಂತ ನನಗೆ ಭಯವಾಗಿತ್ತು. ನನ್ನ ಪುಣ್ಯ, ನೀನು ಇದಕ್ಕೆಲ್ಲಾ ಹೊಂದಿಕೊಂಡೆ. ನನ್ನನ್ನೂ ಮೀರಿಸುವ ಹಾಗೆ ಹೊಲದಲ್ಲಿ ದುಡಿಯತೊಡಗಿದೆ. ರೈತರ ಹೆಂಗಸರೂ ಕೂಡಾ ನಿನ್ನ ದುಡಿತ ನೋಡಿ ಬೆರಳು ಕಚ್ಚುತ್ತಾರೆ.

**ಸರೋಜ :**

ದುಡಿಯದಿದ್ದರೆ ಸಂಸಾರ ನಡೀಬೇಕಲ್ಲರೀ !

**ಸದಾಶಿವ :**

ಈಗ ನೀನು ಹದಿನಾರಾಣೆ ಸಂಸಾರಿಯಾದೆ ಸರೋಜಾ ! ಈ ಮನೆಯ ಲಕ್ಷ್ಮಿಯಾದೆ !

– ಗೀತೆ –

**ಸದಾಶಿವ** .

ನೀನು ಈ ಮನೆಯ ರಾಣಿ, ನಾನೇ ರಾಜಾ

**ಸರೋಜ** :

ನಾನು ನೀವೂ ಸೇರಿ ಹಾಲು ಜೇನಿನ ಹಾಗೆ

**ಸದಾಶಿವ** :

ಸಂಸಾರ ಮಾಡುವ ಸರೋಜಾ ॥ ೧ ॥

**ಸರೋಜ** :

ನಾನು ಈ ಮನೆಯ ರಾಣಿ, ನೀವೆ ರಾಜಾ
ನಾನು ನೀವೂ ಸೇರಿ ಪ್ರೇಮಸಾಮೆಯನೇರಿ

**ಸದಾಶಿವ** :

ಸಂಸಾರ ಮಾಡುವ ಸರೋಜಾ ॥ ೨ ॥

**ಸರೋಜ** :

ಮಲ್ಲಣ್ಣ ಬರುತ್ತಾನೊ ಇಲ್ಲವೊ. ಪಾರ್ವತಿಗೆ ನನ್ನ ಮೇಲೆ ಇನ್ನೂ ಸಿಟ್ಟಿದೆಯೊ ಏನೊ.

**ಸದಾಶಿವ** :

ಒಂದು ಒಂದೂವರೆ ವರ್ಷ ಆಗುತಾ ಬಂತು ಅಲ್ಲವೇನು ನೀನು ಆ ಮನೆ ಬಿಟ್ಟುಬಂದು ? ಇಷ್ಟು ದಿನ ಎಲ್ಲಿ ಉಳಿದೀತು ಅವಳ ಸಿಟ್ಟು ? ಹಿಂದಿನದೆಲ್ಲಾ ಮರೆತುಬಿಟ್ಟಿರಬಹುದು ಅವಳೂ.

**ಸರೋಜ** :

ನನಗಂತೂ ಅವಳ ಬಗ್ಗೆ ಏನೂ ಕೋಪವಿಲ್ಲ. ಅಲ್ಲಿದ್ದಾಗ ನಾನೂ ಸರಿಯಾಗಿ ನಡೆದುಕೊಳ್ಳಲಿಲ್ಲ.

**ಸದಾಶಿವ** :

ಅದೂ ಒಂದು ಕಾಲ ಸರೋಜಾ. ಅದೇನು ನಿನ್ನ ತಪ್ಪಲ್ಲ. ವಯಸ್ಸಿನ ತಪ್ಪು. ಬೆಳೆಯುತ್ತಾ ಬಂದಂತೆ ಎಲ್ಲರೂ ಸುಧಾರಿಸುತ್ತಾರೆ.

**ಸರೋಜ** :

ಇದೊಂದು ವರ್ಷ ಕಳೆದರೆ ಮುಂದೆ ಚಿಂತೆಯಿಲ್ಲ.

**ಸದಾಶಿವ :**

ಹೌದು. ಈ ವರ್ಷ ಮಾತ್ರ ಬಹಳ ಕಷ್ಟ. ನೀನು ಬೇಕಾದರೆ ಮಲ್ಲಣ್ಣನ ಮನೆಯಲ್ಲಿದ್ದು ಬಾ ಕೆಲವು ದಿವಸ. ನಾಂ ಎತ್ತುಗಳಿಗೆ ನೀರು ಕುಡಿಸಿ ಕೊಂಡು ಬಂದುಬಿಡುತ್ತೇನೆ.

(ಹೋಗುವನು. ಸರೋಜ ಪಡಸಾಲೆಯ ಕಸ ಗುಡಿಸುತ್ತಿರುವಳು. ಸ್ವಲ್ಪ ಹೊತ್ತಿನಲ್ಲಿ ಮಲ್ಲಣ್ಣ ಬರುವನು. ಅವನ ಕೈಯಲ್ಲೊಂದು ಚೀಲವಿದೆ. ಅವನ ಹಿಂದಿನಿಂದ ಪಾರ್ವತಿಯೂ ಬರುವಳು)

**ಸರೋಜ :**

(ಸಡಗರದಿಂದ) ಅಣ್ಣಾ! ಅತ್ತಿಗೇ! ಬರ್ರಿ, ಕೂಡ್ರಿ – ಬಹಳ ಹೊತ್ತಿನಿಂದ ನಾವಿಬ್ಬರೂ ನಿಮ್ಮ ಹಾದಿ ನೋಡುತ್ತಿದ್ದೆವು, ಇದೇ ಈಗ ಅವರೂ ಹೊರಗೆ ಹೋದರು. ಈಗ ಬಂದಾರು.

(ಜಮಖಾನ ಹಾಸುವಳು. ಅವರು ಕೂಡುವರು)

**ಸರೋಜ :**

ಸುಖವಾಗಿದ್ದೀಯಾ ಅತ್ತಿಗೆ?

**ಪಾರ್ವತಿ :**

ಹೂಂ. ಇದ್ದೇನಿ ನೋಡು ಹೀಂಗ.

**ಮಲ್ಲಪ್ಪ :**

ಸದಾಶಿವನೂ ನೀನೂ ಬಹಳ ಚಲೋವಾಗಿ ಸಂಸಾರ ನಡಸಿರೋದು ಕೇಳಿ ಇವಳಿಗೆಷ್ಟು ಆನಂದ ಆತು ಅನ್ನೋದನ್ನ ಹೇಳಿ ಮುಗಿಯೋದಿಲ್ಲ ಸರೋಜಾ.

**ಸರೋಜ :**

ನಾನು ಎಲ್ಲಾ ಅತ್ತಿಗೆಯಿಂದಲೇ ಕಲಿತದ್ದು. ಇಲ್ಲವಾದರೆ ನಮಗೇನು ಗೊತ್ತಿತ್ತು ಸಂಸಾರ!

**ಪಾರ್ವತಿ :**

(ಹೆಮ್ಮೆಯಿಂದ, ಗಂಡನಿಗೆ) ನೋಡಿದಿರೋ ಇಲ್ಲೋ! ಹ್ಯಾಂಗ ತಯಾರಾಗಿದ್ದಾಳ ನಿಮ್ಮ ತಂಗಿ! (ಸರೋಜಳಿಗೆ) ನಿನಗ ಬುದ್ಧಿ ಬರಲಿ ಅಂತಲೇ

ನಾನಿನ್ನ ಸಂಗಡ ನಿಷ್ಠುರದಿಂದ ಮಾತಾಡುತಿದ್ದಿನಿ ಸರ್ಜೀ! ನನ್ನ ಮ್ಯಾಲ ಸಿಟ್ಟಿಲ್ಲ, ಹೌದಲ್ಲೋ?

**ಸರೋಜ.**

ಸಿಟ್ಟ್ಯಾಕೆ ಇರಬೇಕು ಅತ್ತಿಗೇ? ನನಗೆ ತಾಯಿಯಿಲ್ಲ, ಅತ್ತೆಯಿಲ್ಲ. ನೀನೇ ತಾಯಿ ಅತ್ತಿಗೆ ಎಲ್ಲಾ!

(ಪಾರ್ವತಿ ಹಿಗ್ಗಿ ಸಂತೋಷದಿಂದಲೂ ಅಭಿಮಾನದಿಂದಲೂ ಸರೋಜಳನ್ನು ತಬ್ಬಿ ನೆತ್ತಿಕೆ ಮುದ್ದಿಡುವಳು.)

**ಮಲ್ಲಪ್ಪ:**

ನೀನೀಗ ಹೊಲಕ್ಕ ಕೆಲಸಕ್ಕ ಹೋಗಿರತೀ ಅಂತ ಸದಾಶಿವ ಹೇಳುತಿದ್ದ, ನಿನಗೆಲ್ಲಾ ರೂಢಿಯಾಗ್ಯೆತೇನ?

**ಸರೋಜ:**

ಮೊದಲು ಕೆಲವು ದಿನ ಆಯಾಸವಾಗುತಿತ್ತು. ಆಮೇಲೆ ತಾನೇ ಸರಿ ಹೋಯಿತು. ಹೊಲದಲ್ಲಿ ಕೆಲಸ ಮಾಡುವವರಲ್ಲಿರುವದರ ಸೊಗಸು ಪಟ್ಟಣದಲ್ಲಿ ಎಲ್ಲಿಂದ ಬಂದೀತು ಮಲ್ಲಣ್ಣಾ? ಹಸುರು ತುಂಬಿ ಮೆರೆಯುವ ಹೊಲದಲ್ಲಿ ನಡೆದಾಡುತಾ ಇರುವದೇ ಒಂದು ಆನಂದ. ಆ ಸುಖದ ಮುಂದೆ ಇನ್ನಾವ ಸುಖವೂ ಇಲ್ಲ.

**ಪಾರ್ವತಿ:**

ನೀನೂ ಹಳ್ಳೀ ಹುಡುಗರ ಹಾಂಗ ಆಗಿಬಿಟ್ಟಿ.

**ಸರೋಜ.**

ಪಟ್ಟಣದ ಹುಡುಗಿಯರದಾದರೂ ಏನು ಸುಖ ಬಿಡು ಅತ್ತಿಗೇ. ಪಾಪ. ಬೆಳಗಿನಿಂದ ಸಂಜೆಯುವರೆಗೆ ಹೊಲಸು ಹವೆಯಲ್ಲಿ, ಸಣ್ಣ ಸಣ್ಣ ಮನೆಗಳಲ್ಲಿ ಕೊಳೆಯುತ್ತಿರುತ್ತಾರೆ. ಸ್ವಚ್ಛವಾದ ಗಾಳಿಯ ಸಹವಾಸವೇ ಇರುವದಿಲ್ಲ. ಆಫೀಸಿನಲ್ಲಾಗಲಿ ಶಾಲೆಗಳಲ್ಲಾಗಲಿ ನೌಕರಿ ಮಾಡುವವರಿಗಾದರೂ ಏನು ಸುಖವಿರುತ್ತದೆಯೆ? ಬರಿಯ ಹೊಟ್ಟೆಪಾಡಿಗಾಗಿ ಮಾಡುತ್ತಿರುತ್ತಾರೆ. ಮಾಡುವ ಕೆಲಸದಲ್ಲಿ ಏನೂ ಆಸಕ್ತಿಯಿರುವದಿಲ್ಲ. ಇಲ್ಲಿ ಹಳ್ಳಿಯಲ್ಲಿ

ನಮ್ಮದು ಹಾಗಲ್ಲ. ನಾವು ಬೆವರಿಳಿಸಿ ಕಷ್ಟಪಟ್ಟು ಬೆಳೆಸಿದ ಬೆಳೆಯನ್ನು ನೋಡಿ ಹಿಗ್ಗಿ ಸಂತೋಷಪಡುತ್ತೇವೆ.

**ಪಾರ್ವತಿ :**

ಆದರೂ ಈ ವರ್ಷ ಬೆಳೆಯೆಲ್ಲಾ ಕೆಟ್ಟು ಹಾಳಾತು.

**ಸರೋಜ :**

ಅದಕ್ಕೇನು ಮಾಡುವದು! ಒಂದೊಂದು ಸಲ ಹಾಗೂ ಆಗುತ್ತದೆ.

**ಪಾರ್ವತಿ :**

ನಿನ್ನ ಮದಿವೆಯಾದಂದಿನಿಂದ ನಮ್ಮಲ್ಲಿಗೆ ಬಂದೇ ಇಲ್ಲವ್ವಾ ನೀನು. ಈಗ ನಿನ್ನ ಕರಕೊಂಡು ಹೋಗುವದಕ್ಕ ಬಂದಿದ್ದೀವಿ. ಸದಾಶಿವ ನಿನ್ನ ಬಿಟ್ಟು ಇದ್ದಾನೋ ಇಲ್ಲೋ ಒಂದೆರಡು ತಿಂಗಳು?

(ಸರೋಜ ನಾಚಿ ಸುಮ್ಮನಿರುವಳು)

(ಹೊರಗಡೆ ಕೂಗು : "ವೋಟು ಯಾರಿಗೆ? ಟೋಪಿ ಶಾಂತಣ್ಣನವರಿಗೆ!")

**ಮಲ್ಲಪ್ಪ :**

ಇಲ್ಲಿಗೂ ಬಂತಲ್ಲ ಈ ವೋಟಿನ ಗದ್ದಲ!

**ಸರೋಜ :**

ಜಿಲ್ಲಾ ಬೋರ್ಡಿನ ಚುನಾವಣೆ ಆಗಬೇಕಲ್ಲ. ಇವನೂ ಒಬ್ಬ ಉಮೇದುವಾರ! ನಿಮ್ಮೂರಿಗೂ ಬಂದಿದ್ದರೇನು ಆಗಲೆ?

**ಮಲ್ಲಪ್ಪ :**

ವೋಟರಿಗೊಂದು ಒದರುವ ಬಾಯಿ ಹಚ್ಚಿಕೊಂಡು ತಲೀ ಚಿಟ್ ಅನ್ನುವ ಹಾಂಗ ಒದರುತ್ತಾ ತಿರುಗುತಿದ್ದಾರ ದಿನಕ್ಕೊಬ್ಬರ ಕಾಟ ಸುರು ಆಗ್ಯೈತಿ. ಇವರಿಗೆಲ್ಲಾ ಎಲ್ಲಿಂದ ವೋಟು ಕೊಡೂದು ನಾವು? ಮಳಿಯಿಲ್ಲದಽ ಬೆಳಿಯಿಲ್ಲದಽ ಬಾಯಿ ಬಾಯಿ ಬಿಡುತಾ ಕುಂತೀವಿ. ಇವರಿಗೆ ಹೋಟು ಬೇಕಂತೆ ಹೋಟು!

(ಹೊರಗಡೆ ಕೂಗು : "ರೈತರಿಗೆ ಸುಖಾ ಯಾರಿಂದ? ಟೋಪಿ ಶಾಂತಣ್ಣನವರಿಂದ!")

(ನಗುನಗುತ್ತ ಸದಾಶಿವ ಬರುವನು)

**ಸದಾಶಿವ :**

ಓಹ್ಹೋ! ಯಾವಾಗ ಬಂದಿರಿ? ಎಲ್ಲಾ ನೆಟ್ಟಗಿದ್ದೀರಾ?

(ಅಷ್ಟರಲ್ಲಿ ಶಾಂತಣ್ಣ ಮೀಸೆ ಕುಣಿಸುತ್ತ ಬರುವನು. ಮೊದಲಿನವೇ ಆದ ಸ್ಟಾರ್ಚ್ ಕಾಲರ್ ಕೋಟು. ಧೋತರಕ್ಕೆ ಬದಲಾಗಿ ಈಗ ಪ್ಯಾಂಟು. ತಲೆಯ ಮೇಲೆ ಅದೇ ಉದ್ದ ಟೋಪಿ. ಕೈಯಲ್ಲಿ ಅದೇ ಕೋಲು. ಅದನ್ನು ಅಲುಗಾಡಿಸುವ ರೀತಿಯೂ ಅದೇ.)

**ಶಾಂತಣ್ಣ .**

ಶರಣು ಶರಣಾರ್ಥಿ! ಎಲ್ಲರಿಗೂ ಶರಣು ಶರಣಾರ್ಥಿ!

**ಸದಾಶಿವ .**

ಬರ್ರಿ ವಕೀಲರೆ. ಇಲ್ಲಿ ಕೂಡ್ರಿ ಕುರ್ಚಿಯ ಮೇಲೆ.

**ಶಾಂತಣ್ಣ :**

ಥ್ಯಾಂಕ್ಸ್. ಮೆನೀಮೆನೀ ಥ್ಯಾಂಕ್ಸ್! ಚುನಾವಣೆಯ ಚಕ್ರವ್ಯೂಹದಲ್ಲಿ ಸಿಕ್ಕುಬಿಟ್ಟಿರುವ ನನಗೆ ಈಗ ಎಲ್ಲೂ ಕೂತುಕೊಳ್ಳಲು ಸಮಯವಿಲ್ಲ. ಮತದಾನದ ದಿನವಂತೂ ಸಮೀಪಿಸಿಬಿಟ್ಟಿದೆ. ಇನ್ನೂ ಇಪ್ಪತ್ತು ಮೂವತ್ತು ಹಳ್ಳಿಗಳಿಗೆ ಭೆಟ್ಟಿಕೊಟ್ಟು ಮತದಾರ ಮಿತ್ರರನ್ನೆಲ್ಲಾ ಕಂಡು ವಿನಂತಿ ಮಾಡಿಕೊಳ್ಳಬೇಕಾಗಿದೆ. ಸಾರ್ವಜನಿಕ ಸೇವೆ ಮಾಡುವ ನಮ್ಮಂಥ ವರದೆಲ್ಲಾ ಹೀಗೆ ಅವಸರದ ಕೆಲಸವೇ ಅಲ್ಲವೆ? (ಸರೋಜಳನ್ನು ದಿಟ್ಟಿಸಿ ವಿಲಕ್ಷಣವಾಗಿ ನಗುತ್ತಾ) ಏನು ಆಶ್ಚರ್ಯ! ಪರಮಾಶ್ಚರ್ಯ! ಸರೋಜಾ ದೇವಿಯವರ ಗುರುತೇ ಸಿಗದ ಹಾಗೆ ಬದಲಾಗಿ ಹೋಗಿದ್ದಾರಲ್ಲಾ? (ಕಣ್ಣು ಮಿಟುಕಿಸಿ ಮೀಸೆ ಕುಣಿಸುತ್ತಾ) ಹ ಹ ಹ ಹ ಹ ಹ! ನಂಬುವದಕ್ಕೇ ಆಗು ವಂತಿಲ್ಲ. ಒಂದು ಒಂದೂವರೆ ವರ್ಷದಲ್ಲೇ ಎಂಥಾ ಬದಲಾವಣೆ!

**ಸರೋಜ :**

(ವ್ಯಂಗ್ಯವಾಗಿ) ನಿಮ್ಮಲ್ಲಿ ಮಾತ್ರ ಸ್ವಲ್ಪ ಕೂಡಾ ಬದಲಾವಣೆ ಕಂಡು ಬರುವದಿಲ್ಲ.

**ಶಾಂತಣ್ಣ :**

(ನಗುತ್ತಾ) ಹಾಗೆ ದಿನಕ್ಕೊಂದು ಬಣ್ಣ ಬದಲಿಸುವವರ ಜಾತಿಗೆ ಸೇರಿದವನಲ್ಲ

ಈ ಶಾಂತಣ್ಣ! ಮೊದಲಿನಿಂದಲೂ ನಾನು ಸಮಾಜಸೇವಕ, ಈಗಲೂ ಸಮಾಜಸೇವಕ, ಈ ದೇಹವಲ್ಲಿ ಉಸಿರಿರುವವರೆಗೂ ನಾನು ಸಮಾಜ ಸೇವಕನಾಗಿಯೇ ಇರುತ್ತೇನೆ. (ಸ್ವಲ್ಪ ನಿಂತು) ಒಂದು ವರ್ಷದ ಹಿಂದೆ ನಾನೊಂದು ಪತ್ರ ಬರೆದು ನಿಮಗೆ ನೌಕರಿ ಸಿಕ್ಕ ಸಂಗತಿ ತಿಳಿಸಿದ್ದೆನಲ್ಲಾ, ಅದಕ್ಕೆ ನಿಮ್ಮಿಂದ ಉತ್ತರವೇ ಬರಲಿಲ್ಲವಲ್ಲ?

**ಸರೋಜ :**

ಸಮಾಜಸೇವೆಯಲ್ಲಿ ತೊಡಗಿರುವ ನಿಮಗೆ ಸ್ವಲ್ಪವೂ ಸಮಯವಿರುವದಿಲ್ಲ. ನಾವು ಪತ್ರ ಬರೆದು ನಿಮ್ಮ ಅಮೌಲ್ಯ ಸಮಯವನ್ನು ಹಾಳುಮಾಡುವ ದಾದರೂ ಯಾಕೆ?

**ಶಾಂತಣ್ಣ :**

ಛೆ. ಛೆ. ಛೆ. ಛೆ. ಛೆ! ಎಂಥಾ ಹೊರೆ ಹೊರೆ ಕೆಲಸವಿದ್ದರೂ ನಿಮ್ಮ ಕೆಲಸ ಅದಕ್ಕಿಂತ ಹೆಚ್ಚಿನದು ನನಗೆ. ನಿಮ್ಮ ಪೂಜ್ಯ ತಾಯಿಗೆ ವಚನಕೊಟ್ಟಿದ್ದೇನೆ: ನಿಮ್ಮ ಯೋಗಕ್ಷೇಮ ನೋಡಿಕೊಳ್ಳುವೆನೆಂತ. ಆದಕ್ಕೇ ನಾನು ಪತ್ರ ಬರೆದದ್ದು.

**ಸರೋಜ :**

ಬಹಳ ಉಪಕಾರವಾಯಿತು.

**ಶಾಂತಣ್ಣ :**

ನೌಕರಿಯ ವಿಚಾರವನ್ನು ನೀವು ಬಿಟ್ಟು ಹಾಗೇ ಆಯಿತೇ?

**ಸರೋಜ .**

ಆ ಸುಡುಗಾಡು ನೌಕರಿಯನ್ನು ತೆಗೆದುಕೊಂಡು ನಾನೇನು ಮಾಡಲಿ? ಮಳೆರಾಯ ಮನಸು ಮಾಡಿದರೆ, ಬೆಳೆ ಚೆನ್ನಾಗಿ ಬಂದರೆ ನಿಮ್ಮಂಥಾ ಹತ್ತು ಮಂದಿಯನ್ನು ನಾನೇ ನೌಕರಿಗಿಟ್ಟುಕೊಳ್ಳಬಲ್ಲೆ!

(ಶಾಂತಣ್ಣ ಬೆಚ್ಚಿಬಿದ್ದು 'ಹಾ!' ಎನ್ನುವನು. ಪಾರ್ವತಿ ನಗುವಳು)

**ಶಾಂತಣ್ಣ :**

(ಸೋಗಿನ ಸಂತೋಷದಿಂದ) ನೀವು ಈ ಸ್ಥಿತಿಗೆ ಬಂದದ್ದು ನೋಡಿದರೆ ನನಗೆ ಹಾಲೂಸಕ್ಕರೆ ಸೇವಿಸಿದಂತಾಗುತ್ತದೆ. ಈ ಲೋಕದಲ್ಲಿ ಹುಟ್ಟಿ ಬಂದ ಮೇಲೆ ಬೇರೆಯವರ ಸುಖವನ್ನು ಕಂಡು ಸಂತೋಷಪಡಬೇಕಾದದ್ದು ನಮ್ಮ ಧರ್ಮ. ಹಾಗೇ, ನಮಗೂ ಸಂತೋಷವನ್ನುಂಟುಮಾಡಬೇಕಾದದ್ದು ನಿಮ್ಮ ಧರ್ಮ. ನಿಮ್ಮೆಲ್ಲರ ಸೇವೆ ಮಾಡುವದಕ್ಕಾಗಿಯೆ ನಾನು ಚುನಾವಣೆಗೆ ನಿಂತಿದ್ದೇನೆ. ನನ್ನ ಪರಿಚಿತರೂ ಹಿತೈಷಿಗಳೂ ಆದ ನೀವೆಲ್ಲಾ ಇಲ್ಲಿದ್ದೀರಿ ಈ ಊರಿನ, ಇದರ ಸುತ್ತಲಿನ ಊರುಗಳ ವೋಟುಗಳನ್ನೆಲ್ಲಾ ನನಗೇ ಕೊಡಿಸಿ ಉಪಕಾರ ಮಾಡಬೇಕು.

**ಸದಾಶಿವ.**

ಆಗಲಿ ವಿಚಾರ ಮಾಡುತ್ತೇವೆ.

**ಮಲ್ಲಪ್ಪ.**

ಮೊದಲು ನಿಮ್ಮ ಮೋಟರಿನ ಒದರುವ ಬಾಯಿ ಬಂದು ಮಾಡಿರಿ. ಆ ಮ್ಯಾಲ ವೋಟಿನ ಮಾತು.

**ಶಾಂತಣ್ಣ :**

(ಕಣ್ಣುಗಳನ್ನರಳಿಸಿ) ಒ – ದ – ರು – ವ ಬಾಯಿ ?

**ಸದಾಶಿವ :**

(ಮುಗುಳ್ನಗೆಯೊಡನೆ) ಅಂದರೆ ಲೌಡ್‌ಸ್ಪೀಕರ್ !

**ಶಾಂತಣ್ಣ .**

(ಗಟ್ಟಿಯಾಗಿ ನಗುತ್ತಾ) ಹೊ ಹೊ ಹೊ ಹೊ ಹೊ! ಕನ್ನಡ ಸಾಹಿತ್ಯವನ್ನೆಲ್ಲಾ ತಿರುಪಿಹಾಕಿದರೂ ಇಂಥಾ ಅದ್ಭುತ ಶಬ್ದ ಇದುವರೆಗೂ ಕಾಣಿಸಿರಲಿಲ್ಲ ನನಗೆ! (ಹೊರಗಡೆ ಲಾಡ್‌ಸ್ಪೀಕರಿನಲ್ಲಿ ಬಂದು ಹಾಡು ಆರಂಭವಾಗುವದು) ಒಳ್ಳೆಯದು! ನಾನೀಗ ಹೊರಡುತ್ತೇನೆ. ನಿಮ್ಮ ವೋಟು, ನಿಮ್ಮ ಊರವರ ವೋಟು, ನಿಮ್ಮ ಗೆಳೆಯರ ವೋಟು, ನಿಮ್ಮ ಆಪ್ತೇಷ್ಟರ ವೋಟು,

ನಿಮ್ಮೆಲ್ಲರ ವೋಟು ನನಗೇ ಮೀಸಲಿರಲಿ ಹಂ! ನನ್ನ ಗುರುತು ಟೋಪಿ! (ಎಡಕ್ಕೆ ತಿರುಗಿ, ಕೋಲನ್ನು ತಿರುಗಿಸುತ್ತಾ) ಒದರುವ ಬಾಯಿ! ಒದರುವ ಬಾಯಿ! (ನಗುತ್ತಾ ಹೋಗುವನು)

ಸ್ವಲ್ಪ ಹೊತ್ತು ಎಲ್ಲರೂ ನಗುತ್ತಿರುವರು. ಹೊರಗಡೆ ಮತ್ತೆ ವೋಟಿನ ಕೂಗಿಗಾರಂಭ ವಾಗಿ ನಿಧಾನವಾಗಿ ನಷ್ಟವಾಗುವುದು)

**ಪಾರ್ವತಿ :**

ನಿನ್ನ ಹೆಂಡತೀನ್ನ ಒಂದೆರಡು ತಿಂಗಳು ಕರಕೊಂಡು ಹೋಗಬೇಕಂತ ಬಂದೀವಿ. ಏನಂತೀ ಸದಾಶಿವಣ್ಣಾ ?

**ಸದಾಶಿವ :**

ನನ್ನದೇನೂ ಅಡ್ಡಿಯಿಲ್ಲ. ನಿಮ್ಮ ಮನೆಯ ಮಗಳನ್ನು ನೀವು ಕರೆದು ಕೊಂಡು ಹೋಗಲು ನಾನು ಬೇಡ ಅನ್ನುವೆನೇ ಪಾರ್ವತಕ್ಕಾ ?

**ಪಾರ್ವತಿ :**

ನಿನ್ನ ಗಂಡನ ಹುಕುಂ ಸಿಕ್ಕಿತಲ್ಲ ಸರ್ಜೀ! ನೀನೇನಂತೀ ?

**ಸರೋಜ :**

(ಗಂಭೀರವಾಗಿ) ನೀನೇನೂ ತಿಳಿದುಕೊಳ್ಳಬಾರದು ಅತ್ತಿಗೇ. ಆದರೆ, ಈಗ ಮನೆ ಬಿಟ್ಟು ಬರಲು ನನಗೆ ಮನಸ್ಸಿಲ್ಲ.

**ಪಾರ್ವತಿ :**

ಯಾಕೇ ? ಹೀಂಗ ಮಾತಾಡುತೀ ?

**ಸರೋಜ :**

ಮಳೆ ಬಂದು ಬೆಳೆ ಬಂದು ಎಲ್ಲಾ ಸುಖವಾಗಿದ್ದರೆ ನಾನೂ ಸಂತೋಷದಿಂದ ತವರು ಮನೆಗೆ ಬರಬಹುದಾಗಿತ್ತು. ಈಗ ನೋಡಿದರೆ ಎಲ್ಲಾ ವಿಪರೀತ. ಇವರು ಹಗಲೂ ರಾತ್ರಿ ಚಿಂತೆ ಮಾಡುತ್ತಾರೆ. ಇಂಥಾ ವೇಳೆಯಲ್ಲಿ ಇವರೊಬ್ಬರನ್ನೇ ಬಿಟ್ಟು ನಾನು ಅಲ್ಲಿಗೆ ಬಂದು ಹ್ಯಾಗೆ ಸಂತೋಷದಿಂದಿರ ಲಿಕ್ಕಾದೀತು ಅತ್ತಿಗೇ ?

(ಹೆಗಲ ಮೇಲೆ ಬಾರುಕೋಲು ಇಟ್ಟುಕೊಂಡು ಸುಹಾಲಿಂಗನ್ನ ಬರುವನು)

## ನಾಲ್ಕನೆಯ ಅಂಕ

**ಮಹಾಲಿಂಗಪ್ಪ:**

ಬಹಾಳ ದಿವಸಕ್ಕ ಭಾಗೀರಥಿ ಬಂದಾಂಗ ಬಂದಿರಿ. ಎಲ್ಲಾ ನೆಟ್ಟಗಃ?

**ಪಾರ್ವತಿ:**

ಹೂಂ. ನೀನೇನು ಕಾಶೀ ಗೀಶೀ ನೋಡಿಕೊಂಡು ಪುಣ್ಯೇ ಪಡೆದು ಬಂದಿ ಯಂತಲ್ಲ ದೊಡ್ಡಪ್ಪಾ?

**ಮಹಾಲಿಂಗಪ್ಪ:**

ಏನು ಪುಣ್ಯೇನೋ ಬಿಡಃ! ಭೂಮಿತಾಯಿಯ ಸೇವಾ ಮಾಡಿಕೊಂತ ಅಂಬಲೀರೊಟ್ಟಿ ತಿಂತಾ ಇರೂದಃ ಎಲ್ಲಾಕ್ಕೂ ಹೆಚ್ಚಿನ ಪುಣ್ಯೇ!

**ಪಾರ್ವತಿ:**

ನಿನ್ನ ಸೊಸೀನ್ನ ಕರಕೊಂಡು ಹೋಗೂಣಂತ ಬಂದಿದ್ದಿವಿ. ಇವಳು ಗಂಡನ್ನ ಬಿಟ್ಟು ಬರಾಕಃ ತಯಾರಿಲ್ಲ.

**ಮಹಾಲಿಂಗಪ್ಪ:**

ಅವಳ್ಯಾಕ ಬಂದಾಳು! ಖರೇ ಹೇಳಬೇಕಂದರ ಅವಳನ್ನ ಎಲ್ಲಿಗೂ ಕಳಿಸೂದಕ್ಕ ನಾನೂ ತಯಾರಿಲ್ಲ,

**ಪಾರ್ವತಿ:**

(ವಿಸ್ಮಯದಿಂದ) ಹಾಂ?

**ಮಹಾಲಿಂಗಪ್ಪ:**

(ಮೆಚ್ಚಿಗೆಯ ದೃಷ್ಟಿಯಿಂದ ಸೊಸೆಯನ್ನು ನೋಡುತ್ತಾ) ಇಂಥಾ ಭಂಗಾರದಂಥಾ ಸೊಸೆಯನ್ನ ಕಳಿಸೂದಕ್ಕ ಯಾರಿಗೆ ಮನಸು ಬಂತೀತಃ ಪಾರೋತೀ! ನನ್ನ ಮನೀಗೆ ದೀಪ ಬಂದಾಂಗ ಇವಳು ಬಂದಾಳ. ಇವಳು ಮುಂದೆ ಕುಂತು ನೀಡಾಕ ಇರದಿದ್ದರ ಈ ಮುದುಕನ ಗಂಟಲಾಗ ತುತ್ತು ಇಳಿಯಾಕಿಲ್ಲ.

**ಸರೋಜ:**

(ಸಂಕೋಚದಿಂದ) ಸಾಕು ಬಿಡಿರಿ. ನನ್ನನ್ನೇನು ಇಷ್ಟು ಹೊಗಳುವದು? (ಒಳಬಾಗಿಲ ಕಡೆ ಹೆಜ್ಜೆಯಿಡುತ್ತಾ) ಒಲಿಗೆ ಉರಿ ಹಚ್ಚುತ್ತೇನೆ. ಮೊದಲು ಅಡಿಗೆಯಾಗಬೇಕಲ್ಲ!

(ತೆರೆಯುರುಳುವುದು)

## ಮುಂದಿನ ಪ್ರಕಟನೆಗಳು

**ಪಾಪ ಕೂಪ**

ವೇಶ್ಯಾಜೀವನದ ವಿಶ್ವವಿಖ್ಯಾತ ಕಾದಂಬರಿ

ಲೇ: ಅಲೆಗ್ಝಾಂಡರ್ ಕುಪ್ರಿನ್

●

**ಪದ್ಮಿನಿ ಪ್ರೇಮಾಪಹರಣ**

ಶ್ರೀ 'ಜಿಬಿಜ್'ರವರ ಕಾದಂಬರಿ

●

**ಪ್ರೋಲಿ ಪಟಾಲಂ**

ಶ್ರೀ ದೇವುಡುರವರ ಕಾದಂಬರಿ

●

**ಬಿಡುಗಡೆಯ ಜೇಡಿ**

ಶ್ರೀ 'ತ. ರಾ. ಸು'ರವರ ಜನಪ್ರಿಯ ಕಾದಂಬರಿಯ

ಸುಲಭ ಬೆಲೆಯ ಆವೃತ್ತಿ

●

**ರಾಜ - ರಾಣಿ - ಗುಲಾಮ**

ಶ್ರೀ ರಾ. ವೆಂ. ಶ್ರೀನಿವಾಸರ ಕಾದಂಬರಿ

●

**ರೂಪಸರ್ಪಿಣಿ**

('ರಾಗಿಣಿ'ಯ ಎರಡನೆಯ ಭಾಗ)

ಶ್ರೀ 'ಭಾರತೀಪ್ರಿಯ'ರ ಕಾದಂಬರಿ

●

**ಹೊನ್ನಾವರದ ಹುಡುಗಿ**

ಶ್ರೀ ಮಾ. ನಾ. ಚೌಡಪ್ಪನವರ ಕಾದಂಬರಿ

●

**ಕಾಂಚನ - ಗಂಗಾ**

('ಕಾಮಿನಿ ಕಾಂಚನ'ದ ಎರಡನೇ ಭಾಗ)

ಶ್ರೀ ಅ. ನ. ಕೃ. ರವರ ಕಾದಂಬರಿ

# ಶಾರದಾ ಪ್ರಕಟನಾಲಯದ ಪ್ರಕಟನೆಗಳು

| | | ಬೆಲೆ | | |
|---|---|---|---|---|
| ೧. | ಕಾರವಾನ್ (ದ್ವಿತೀಯ ಮುದ್ರಣ) | ೧ | ೪ | ೦ |
| ೨. | ಸ್ವಾತಂತ್ರ್ಯದೆಡೆಗೆ (ದ್ವಿತೀಯ ಮುದ್ರಣ) | ೨ | ೪ | ೦ |
| ೩. | ಜೀವನ – ಕಲೆ * | ೧ | ೦ | ೦ |
| ೪. | ಮುಗುಳುನಗೆ * | ೧ | ೪ | ೦ |
| ೫. | ಸ್ವಪ್ನಸುಂದರಿ (ದ್ವಿತೀಯ ಮುದ್ರಣ) | ೧ | ೪ | ೦ |
| ೬. | ಆಲದ ಹೂ | ೧ | ೧೨ | ೦ |
| ೭. | ಹುಡುಗಾಟ | ೧ | ೪ | ೦ |
| ೮. | ಶವದ ಮನೆ | ೧ | ೪ | ೦ |
| ೯. | ಎದಿರೇಟು | ೧ | ೮ | ೦ |
| ೧೦. | ಸರ್ವಮಂಗಳಾ (ದ್ವಿತೀಯ ಮುದ್ರಣ) | ೩ | ೮ | ೦ |
| ೧೧. | ಕೇಡಿಗನ ಕಿಡಿಗಳು | ೧ | ೦ | ೦ |
| ೧೨. | ದೇವತೆಗಳು ನಕ್ಕಾಗ | ೧ | ೪ | ೦ |
| ೧೩. | ಜ್ವಾಲಾಮುಖಿಯ ಮೇಲೆ | ೪ | ೦ | ೦ |
| ೧೪. | ನನ್ನ ರಸಿಕ ಮತ್ತು ಬಂಗಾರದ ಗೆಜ್ಜೆ | ೧ | ೮ | ೦ |
| ೧೫. | ಹಾಳು – ಮೂಳು | ೧ | ೦ | ೦ |
| ೧೬. | ನಾಡಿಗೇರರ ನಗೆಬರಹಗಳು ೧ | ೧ | ೪ | ೦ |
| ೧೭. | ಮೋಹದ ಬಲೆಯಲ್ಲಿ | ೫ | ೧೨ | ೦ |
| ೧೮. | ಸಾವಿನೊಂದಿಗೆ ಸರಸ | ೧ | ೪ | ೦ |
| ೧೯. | ಅನುರಾಗ | ೧ | ೪ | ೦ |
| ೨೦. | ಬಿಡುಗಡೆಯ ಬೇಡಿ | ೩ | ೪ | ೦ |
| ೨೧. | ಜೋಳದ ಬೆಳೆಯ ನಡುವೆ | ೧ | ೪ | ೦ |
| ೨೨. | ಜರತಾರಿ ಜಗದ್ಗುರು | ೩ | ೧೨ | ೦ |
| ೨೩. | ಕಾನ್ವೆಂಟ್ ಗರ್ಲ್ | ೧ | ೦ | ೦ |
| ೨೪. | ಖಾನಾವಳಿಯ ನೀಲಾ | ೧ | ೦ | ೦ |
| ೨೫. | ರಂಗನಾಯಕಿ | ೨ | ೦ | ೦ |

* ಪ್ರತಿಗಳು ಮುಗಿದಿವೆ.

| | | |
|---|---|---|
| ೨೬. | ಮದುವೆ ಮಾಡಿ ನೋಡು | ೧೦೦ |
| ೨೭. | ಕಲ್ಯಾಣಿ (ದ್ವಿತೀಯ ಮುದ್ರಣ) | ೧ ೮ ೦ |
| ೨೮. | ನೀ ನನ್ನ ಮುಟ್ಟಬೇಡ | ೧ ೮ ೦ |
| ೨೯. | ನನ್ನ ದೇವರು ('ಕುವೆಂಪು' ರವರ ಕಥಾಸಂಕಲನ) | ೧ ೪ ೦ |
| ೩೦. | ಕಾಮಿನಿ – ಕಾಂಚನ | ೧ ೮ ೦ |
| ೩೧. | ಜನಿವಾರ ಮತ್ತು ಶಿವದಾರ | ೧ ೮ ೦ |
| ೩೨. | ಮಲ್ಲಿ | ೧ ೮ ೦ |
| ೩೩. | ಆನಂದ ಲಹರಿ | ೦ ೧೨ ೦ |
| ೩೪. | ಸೀತಾ – ರತ್ನ | ೦ ೧೨ ೦ |
| ೩೫. | ನಾಡಿಗೇರರ ನಗೆಬರಹಗಳು ೨ | ೧ ೮ ೦ |
| ೩೬. | ನಾನು ಪೋಲೀಸನಾಗಿದ್ದೆ | ೧ ೮ ೦ |
| ೩೭. | ರಾಗಿಣಿ | ೧ ೮ ೦ |
| ೩೮. | ಮಧುಚಂದ್ರ | ೦ ೧೨ ೦ |
| ೩೯. | ಬಂಗಾರದ ಜಿಂಕೆಯ ಹಿಂದೆ | ೧ ೮ ೦ |
| ೪೦. | ಬಣ್ಣದ ಮಾಲಿಂಗ | ೧ ೮ ೦ |
| ೪೧. | ಗೋದಾದೇವಿ | ೧ ೮ ೦ |
| ೪೨. | ಪಟ್ಟಣದ ಹುಡುಗಿ (ನಾಟಕ) | ೧ ೪ ೦ |

---

## ಬಸವರಾಜ ಕಟ್ಟೀಮನಿಯವರ ಕೃತಿಗಳು :

—o—

### ಕಾದಂಬರಿಗಳು :

ಸ್ವಾತಂತ್ರ್ಯದೆಡೆಗೆ
ಮಾಡಿ ಮಡಿದವರು
ಜ್ವಾಲಾಮುಖಿಯ ಮೇಲೆ
ಮೋಹದ ಬಲೆಯಲ್ಲಿ
ಬೀದಿಯಲ್ಲಿ ಬಿದ್ದವಳು
ಮಣ್ಣು ಮತ್ತು ಹೆಣ್ಣು
ಜರತಾರಿ ಜಗದ್ಗುರು
ಖಾನಾವಳಿಯ ನೀಲಾ
ನೀ ನನ್ನ ಮುಟ್ಟಬೇಡ
ಜನಿವಾರ ಮತ್ತು ಶಿವದಾರ
ಬಲೆಯ ಬೀಸಿದರು
ನಾನು ಪೋಲೀಸನಾಗಿದ್ದೆ
ಬಂಗಾರದ ಜಿಂಕೆಯ ಹಿಂದೆ
ಗೋವಾದೇವಿ

### ಕಥಾಸಂಗ್ರಹಗಳು :

ಕಾರವಾನ್
ಗುಲಾಬಿ ಹೂ
ಆಗಸ್ಟ್ ಒಂಭತ್ತು
ಸೆರೆಯಿಂದ ಹೊರಗೆ
ಜೋಳದ ಬೆಳೆಯ ನಡುವೆ